

# ವಿವೇಕಪ್ರಭ

ಫೆಬ್ರವರಿ-2017

ಸಂಪುಟ 18 ಸಂಚಿಕೆ 02



## ವಿಶೇಷ ಲೇಖನ










## ಧಾರಾವಾಹಿ











**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಆತ್ಮಜ್ಞಾನಂದ*

**ಸಂಪಾದಕರು**
*ಸ್ವಾಮಿ ಜ್ಞಾನಯೋಗಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

**ಮುಖಪುಟ:**
ಗದಾಧರನ ಭಾವಸಮಾಧಿ

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505

**ಚಂದಾ ವಿವರ**

ಬಿಡಿ ಪ್ರತಿ : ₹14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹3,000
ಪೋಷಕರು : ₹5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಪ್ರಾರ್ಥನೆ

# ಶ್ರೀರಾಮಕೃಷ್ಣ ಸುಪ್ರಭಾತಮ್ - ೪

**ಅತ್ಯಂತನಿರ್ಮಲಮನಸ್ಕ ಸಮಸ್ತಲೋಕೈಃ**
**ಸ್ತುತ್ಯಸ್ವಭಾವ ಭವಶೋಕವಿನಾಶಹೇತೋ ।**
**ಪ್ರತ್ಯಗ್ರಭವ್ಯಪಥದರ್ಶಕ ಭಕ್ತಿಯೋಗಿನ್**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೧೦ ॥**



ಅತ್ಯಂತ ನಿರ್ಮಲವಾದ ಮನಸ್ಸುಳ್ಳ, ಎಲ್ಲಾ ಲೋಕದಿಂದಲೂ ಸ್ತೋತ್ರ ಮಾಡಲ್ಪಡುವ ಸ್ವಭಾವವುಳ್ಳ, ಸಂಸಾರದ ದುಃಖವನ್ನು ನಾಶಮಾಡಬಲ್ಲ, ಹೊಚ್ಚಹೊಸ ಮುಕ್ತಿಮಾರ್ಗವನ್ನು ತೋರಿಸಿಕೊಟ್ಟ ಭಕ್ತಿಯೋಗಿ ಶ್ರೀರಾಮಕೃಷ್ಣರೆ, ನಿಮಗೆ ಶುಭೋದಯವಾಗಲಿ.

**ಸಂತಾನಿತಾತ್ಮಸುಖಭಾರತಮಾತೃದಿವ್ಯ-**
**ಸಂತಾನಸತ್ತಮ ಸನಾತನ ಧರ್ಮಚಾರಿನ್ ।**
**ಸಂತಾಪನಾಶನ ಸದಾ ಶರಣಾಗತಾನಾಮ್**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೧೧ ॥**

ನಿರಂತರ ಆತ್ಮಸುಖದಲ್ಲಿ ಮುಳುಗಿರುವ ಭಾರತಮಾತೆಯ ದಿವ್ಯ ಪುತ್ರರಲ್ಲಿ ಶ್ರೇಷ್ಠರಾದ, ಸನಾತನ ಧರ್ಮವನ್ನು ಆಚರಿಸುವ, ಶರಣಾಗತರಾದವರ ದುಃಖವನ್ನು ಸದಾ ನಾಶಮಾಡುವ ಶ್ರೀರಾಮಕೃಷ್ಣರೆ, ನಿಮಗೆ ಶುಭೋದಯವಾಗಲಿ.

**ವೈರಾಗ್ಯಶಾಂತಿಮಣಿಮಂದಿರದಿವ್ಯದೀಪ್ತಿ-**
**ಪೂರಾಭಿದೀಪ್ತಮುಖ ಸತ್ತ್ವಗುಣೈಕಸಿಂಧೋ ।**
**ಸಾರಾಮಲಾಶಯ ಸದಾಶಯಗೀತಕೀರ್ತೇ**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೧೨ ॥**

ವೈರಾಗ್ಯ ಮತ್ತು ಶಾಂತಿ ಎಂಬ ರತ್ನಗಳ ನೆಲೆಯಾದ, ದಿವ್ಯ ಕಾಂತಿ ಪ್ರವಾಹದಿಂದ ಬೆಳಗುತ್ತಿರುವ ಮುಖವುಳ್ಳ, ಕೇವಲ ಸತ್ತ್ವಗುಣದ ಸಾಗರವಾಗಿರುವ, ಶುದ್ಧವಾದ ಚಿಂತನೆಗಳುಳ್ಳ, ಸದಾಶಯವುಳ್ಳವರಿಂದ ಕೊಂಡಾಡಲ್ಪಟ್ಟ ಕೀರ್ತಿಯುಳ್ಳ ಶ್ರೀರಾಮಕೃಷ್ಣರೆ, ನಿಮಗೆ ಶುಭೋದಯವಾಗಲಿ.

**ಯಃ ಪ್ರಾತರೇತದತಿಪಾವನಸುಪ್ರಭಾತಂ**
**ಶ್ರೀರಾಮಕೃಷ್ಣಶುಭನಾಮನಿಸುಪ್ರಣೀತಮ್ ।**
**ಭಕ್ತ್ಯಾ ಪಠೇತ್ ಸ ತು ಭವಾರ್ಣವಪಾರಮೇತ್ಯ**
**ಮುಕ್ತ್ಯಾಸ್ಪದಂ ಮುರರಿಪೋಃ ಪದಮಾಶು ಯಾಯಾತ್ ॥ ೧೩॥**

ಶ್ರೀರಾಮಕೃಷ್ಣರ ಮಂಗಳನಾಮವನ್ನಾಧರಿಸಿ ರಚಿಸಿದ ಈ ಅತ್ಯಂತ ಪವಿತ್ರವಾದ ಸುಪ್ರಭಾತ ಸ್ತೋತ್ರವನ್ನು ಬೆಳಿಗ್ಗೆ ಭಕ್ತಿಯಿಂದ ಯಾರು ಪಠಿಸುವರೋ ಅವರು ಈ ಭವಸಾಗರವನ್ನು ದಾಟಿ, ಮುಕ್ತಿಯ ನೆಲೆಯಾದ, ಮುರರಿಪುವಾದ ನಾರಾಯಣನ ನೆಲೆಯನ್ನು ಬೇಗನೆ ಸೇರುವರು.

**-ಸ್ವಾಮಿ ಜ್ಞಾನಾನಂದ ಸರಸ್ವತೀ**

---

ಸೂಕ್ತಿಪ್ರಭ

# ಶ್ರೀರಾಮಕೃಷ್ಣರ ಉಪದೇಶಗಳು

❁ ವ್ಯಾಕುಲ ಹೃದಯದಿಂದ ಆತನಿಗೆ ಪ್ರಾರ್ಥನೆ ಸಲ್ಲಿಸು; ಆತನಿಗಾಗಿ ಅಳು. ಆಗ ಚಿತ್ತಶುದ್ಧಿ ಉಂಟಾಗುತ್ತದೆ. ನಿರ್ಮಲವಾದ ನೀರಿನಲ್ಲಿ ಸೂರ್ಯನ ಪ್ರತಿಬಿಂಬವನ್ನು ನೋಡಬಹುದು. ಭಕ್ತನ 'ನಾನು' ಎಂಬ ರೂಪಿನ ಕನ್ನಡಿಯಲ್ಲಿ ಸಗುಣಬ್ರಹ್ಮನ, ಆದ್ಯಾಶಕ್ತಿಯ ದರ್ಶನ ದೊರೆಯುತ್ತದೆ. ಆದರೆ ಕನ್ನಡಿಯನ್ನು ಬಹಳ ಚೆನ್ನಾಗಿ ಒರೆಸಬೇಕು. ಕೊಳೆ ಕುಳಿತಿದ್ದರೆ ಸರಿಯಾದ ಪ್ರತಿಬಿಂಬ ಬೀಳದು.

❁ ಪ್ರೇಮ ಅಂದರೆ ಭಗವಂತನಲ್ಲಿ ಅಂಥ ಅಗಾಧವಾದ ಅನುರಾಗ. ಅದರ ದೆಸೆಯಿಂದ ಜಗತ್ತೂ ಮರೆತುಹೋಗಿಬಿಡುತ್ತದೆ. ಜೊತೆಗೆ ಅಷ್ಟೊಂದು ಪ್ರಿಯವಾಗಿರುವ ಸ್ವಂತ ದೇಹ ಕೂಡ ಮರೆತುಹೋಗಿಬಿಡುತ್ತದೆ. ಅದಕ್ಕೆ 'ಪ್ರೇಮ' ಅಂತ ಹೆಸರು.

❁ ಭರತರಾಜ 'ಜಿಂಕೆ! ಜಿಂಕೆ!' ಎಂದು ಕೂಗಿಕೊಳ್ಳುತ್ತಲೆ ದೇಹತ್ಯಾಗ ಮಾಡಿದ. ಅದಕ್ಕಾಗಿ ಮುಂದಿನ ಜನ್ಮದಲ್ಲಿ ಆತನಿಗೆ ಜಿಂಕೆಯ ಜನ್ಮ ದೊರೆಯಿತು. ಭಗವಂತನ ಚಿಂತನೆ ಮಾಡುತ್ತ ದೇಹತ್ಯಾಗ ಮಾಡಿದರೆ ಭಗವಂತನ ಸಾಕ್ಷಾತ್ಕಾರ ದೊರಕುತ್ತದೆ. ಮತ್ತೆ ಈ ಸಂಸಾರಕ್ಕೆ ಬರಬೇಕಾಗಿಲ್ಲ.

❁ ಈ ಸಂಸಾರದಲ್ಲಿ ಕಾಮ, ಕ್ರೋಧ ಇವೇ ಮೊದಲಾದುವುಗಳೊಡನೆ ಯುದ್ಧ ಮಾಡಬೇಕಾಗಿದೆ. ವಿವಿಧ ಕಾಮನೆಗಳೊಡನೆ ಯುದ್ಧಮಾಡಬೇಕಾಗಿದೆ, ಆಸಕ್ತಿಯೊಡನೆ ಯುದ್ಧಮಾಡಬೇಕಾಗಿದೆ. ಯುದ್ಧವನ್ನು ಕೋಟೆಯೊಳಗಿನಿಂದ ಮಾಡುವುದೇ ಮೇಲು. ಗೃಹದಲ್ಲಿರುವುದು ಕೋಟೆಯೊಳಗಿನಿಂದ ಯುದ್ಧ ಮಾಡಿದ ಹಾಗೆ.

❁ ಸಂಸಾರದಲ್ಲಿ ಇಟ್ಟಿದ್ದಾನೆ, ಅದಕ್ಕೇನು ತಾನೆ ಮಾಡಲಾದೀತು? ಎಲ್ಲವನ್ನೂ ಆತನಿಗೆ ಸಮರ್ಪಿಸಿಬಿಡು – ಆತನಿಗೆ ಆತ್ಮಸಮರ್ಪಣೆ ಮಾಡಿಕೊ. ಹಾಗೆ ಮಾಡಿದರೆ ಮತ್ತೆ ಯಾವ ತೊಂದರೆಯೂ ಬರದು. ಆಗ ಎಲ್ಲವನ್ನೂ ಆತನೇ ಮಾಡುತ್ತಿದ್ದಾನೆ ಎಂಬ ಅರಿವು ಉಂಟಾಗುತ್ತದೆ.

ಶ್ರೀರಾಮಕೃಷ್ಣ ವಚನವೇದದಿಂದ

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ)

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.
ಎಂ.ಎಲ್.ಹಳ್ಳಿ, ಸಾಗರ ತಾಲೂಕು
ಶಿವಮೊಗ್ಗ ಜಿಲ್ಲೆ
ಫೋನ್: 08183–296516

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ
ಪ್ರವಾಸಿ ಮಂದಿರ ಹತ್ತಿರ,
ಹೊಸನಗರ–577418
ಶಿವಮೊಗ್ಗ ಜಿಲ್ಲೆ
ಫೋನ್: 08185–221915



ಮಾನ್ಯ ವಿದ್ಯಾಕಾಂಕ್ಷಿಗಳೇ.

"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸ ಖಂಡಗಳು ಮತ್ತು ಉಕ್ಕಿನಂತಹ ನರಗಳು. ನಾವು ಬಹಳ ಕಾಲ ಅತ್ತಿದ್ದೇವೆ. ಇನ್ನು ಮುಂದೆ ಅಳುವುದು ಬೇಡ. ನಿಮ್ಮ ಕಾಲ ಮೇಲೆ ನೀವು ನಿಂತುಕೊಂಡು ಮನುಷ್ಯರಾಗಿ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣದ ಧರ್ಮ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣ ಸಿದ್ಧಾಂತಗಳು. ಸಮಗ್ರ ಮಾನವ– ನಿರ್ಮಾಣದ ಶಿಕ್ಷಣವೇ ನಮಗಿಂದು ಬೇಕಾಗಿರುವುದು" ಎಂದು ಸ್ವಾಮಿ ವಿವೇಕಾನಂದರು ಬಹಳ ಹಿಂದೆಯೇ ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಸಚ್ಚಾರಿತ್ರ್ಯವುಳ್ಳ ಧೀಮಂತ, ವಿನಯವಂತ, ಸತ್ಪುರುಷರ ನಿರ್ಮಾಣವು ಸುಸಂಸ್ಕೃತ ಹಾಗೂ ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣದ ಮೂಲಕವೇ ಆಗಬೇಕಾಗಿದೆ.

ರಾಜ್ಯದಾದ್ಯಂತ ಬಂದಿರುವ ನೂರಾರು ಮಕ್ಕಳು ಇಲ್ಲಿ ಕಲಿಯುತ್ತಿದ್ದು, ಸಂಸ್ಥೆಯು ಅವರನ್ನು ಅಕ್ಕರೆಯಿಂದ, ಮಮತೆಯಿಂದ, ಪೋಷಿಸಿ ಹೃದಯವರಳಿಸಿ, ಅವರ ಅಂತರಂಗದಲ್ಲಿ ಹುದುಗಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ, ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನಾಗಿ ರೂಪಿಸುತ್ತಿದೆ.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ವಿದ್ಯಾಸಂಸ್ಥೆಗಳು ಮಕ್ಕಳ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುತ್ತಿವೆ. ದೇಶದಾದ್ಯಂತ ಖ್ಯಾತಿ ಹೊತ್ತ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ, ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:–** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :–** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:–** ಎಲ್.ಕೆ.ಜಿ ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:–**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ.

5) **ವಸತಿ ಶಾಲೆಗೆ ಪ್ರವೇಶ:–**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ
* ಪ್ರವೇಶ ಪರೀಕ್ಷೆ, ಸಂದರ್ಶನವಿರುತ್ತದೆ
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿರುತ್ತದೆ
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಶಾಲೆಯನ್ನು ಸಂಪರ್ಕಿಸಿ
* ಹೆಚ್ಚಿನ ವಿವರ ಶಾಲೆಯಲ್ಲಿ ಲಭ್ಯ








**ರಾಮಕೃಷ್ಣ ಮಿಷನ್, ಪೊಂಡಾ, ಗೋವಾ**

*(Reverside Centre)*

**Parsol, P.O.Khadepar Branch Office, Inside From Khursakade Bus Stop,**
**After Chowgule Maruti Service, PONDA, GOA - 403406**
**Mob: 09414042638** Website: www.rkmgoa.org


# ಒಂದು ಮನವಿ

ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತದಾದ್ಯಂತ ಸಂಚರಿಸುತ್ತಿದ್ದಾಗ ಗೋವಾದ ಮಡಗಾಂವ್‌ಗೆ 1892ರ ಅಕ್ಟೋಬರ್ 27ರಂದು ಬಂದರು. ಅಲ್ಲಿನ ಪ್ರಸಿದ್ಧ ವಿದ್ವಾಂಸರು ಹಾಗೂ ಭಕ್ತರಾಗಿದ್ದ ಶ್ರೀ ಸುಬ್ರಾಯ ನಾಯಕ್ ಅವರು ಸ್ವಾಮೀಜಿಯವರನ್ನು ಆದರದಿಂದ ಬರಮಾಡಿಕೊಂಡು, ತಮ್ಮ ನಿವಾಸದಲ್ಲೇ ಅವರ ವಸತಿಗೆ ವ್ಯವಸ್ಥೆ ಮಾಡಿಕೊಟ್ಟರು. ಸ್ವಾಮೀಜಿ ಗೋವೆಯ ಶಾಂತದುರ್ಗಾ ದೇವಾಲಯ, ಮಹಾಲಸಾ ದೇವಾಲಯ ಹಾಗೂ ಮಂಗೇಶ ದೇವಾಲಯಗಳನ್ನು ಸಂದರ್ಶಿಸಿದರು. ಅವರು ಪಣಜಿ ನಗರವನ್ನು ಕೂಡ ಸಂದರ್ಶಿಸಿದರು. ಸ್ವಾಮೀಜಿ ಗೋವೆಯ ಕ್ರೈಸ್ತ ದೇವಾಲಯಗಳನ್ನು ಸಂದರ್ಶಿಸಿ, ಅಲ್ಲಿ ಹಳೆಯ ಲ್ಯಾಟಿನ್ ಧರ್ಮಗ್ರಂಥಗಳ ಅಧ್ಯಯನ ಮಾಡಿದರು.

ಭಕ್ತರುಗಳಿಂದ ನಿರ್ವಹಿಸಲ್ಪಡುವ '**ರಾಮಕೃಷ್ಣ-ವಿವೇಕಾನಂದ ಸೇವಾ ಸಮಿತಿ**'ಯು 1996ರಲ್ಲಿ ಮಡಗಾಂವ್‌ನಲ್ಲಿ ಆರಂಭವಾಯಿತು. ಮುಂದೆ ಈ ಸಮಿತಿಯ ಚಟುವಟಿಕೆ ವ್ಯಾಪಕಗೊಂಡು, 2006ರಲ್ಲಿ ಆರು ಎಕರೆ ಜಮೀನನ್ನು ಪಡೆಯಿತು. ಈ ಸಮಿತಿಯು ದಿವ್ಯತ್ರಯರ ಜೀವನ, ಸಂದೇಶಗಳ ಪ್ರಚಾರವಲ್ಲದೆ ಯುವಕರಿಗಾಗಿ ವ್ಯಕ್ತಿತ್ವ ವಿಕಸನ, ವಿವಿಧ ಸ್ಪರ್ಧೆಗಳು ಹಾಗೂ ಅನೇಕ ಶಿಬಿರಗಳನ್ನು ನಡೆಸುತ್ತ ಬಂದಿದೆ.

ಸಮಿತಿಯ ಕೋರಿಕೆಯ ಮೇರೆಗೆ ರಾಮಕೃಷ್ಣ ಮಹಾಸಂಘವು ಗೋವೆಯನ್ನು ರಾಮಕೃಷ್ಣ ಮಿಷನ್ನಿನ ಅಧಿಕೃತ ಶಾಖಾಕೇಂದ್ರವನ್ನಾಗಿ ಮಾಡಿಕೊಳ್ಳಲು ಒಪ್ಪಿಕೊಂಡಿದೆ. ಪ್ರಸ್ತುತ ಹಸ್ತಾಂತರ ಕಾರ್ಯದ ಅಧಿಕೃತ ಕೆಲಸಗಳು ತ್ವರಿತವಾಗಿ ನಡೆಯುತ್ತಿವೆ.

**ರಾಮಕೃಷ್ಣ ಮಿಷನ್, ಪೊಂಡಾ, ಗೋವಾ ಇದರ ಹೊಸ ಯೋಜನೆಗಳು :**

**1.** ಭಕ್ತ ದಂಪತಿಗಳೊಬ್ಬರ ಉದಾರ ನೆರವಿನಿಂದ ರಾಮಕೃಷ್ಣ ಮಿಷನ್ನಿಗೆ 471 ಮೀ.ಚದರಳತೆಯ ಜಮೀನು ಪ್ರಾಪ್ತವಾಗಿದ್ದು, ಇದು **ಪೊಂಡಾ** ಪಟ್ಟಣದ ಪ್ರಧಾನ ಭಾಗದಲ್ಲಿರುವ ದಾದಾ ವೈದ್ಯ ಚೌಕದಲ್ಲಿದೆ. ಇಲ್ಲಿ ಮಿಷನ್ 'ವಿವೇಕಾನಂದ ಸಾಂಸ್ಕೃತಿಕ ಕೇಂದ್ರ'ವನ್ನು ಸ್ಥಾಪಿಸಲು ಮೂರು ಅಂತಸ್ತಿನ ಕಟ್ಟಡವೊಂದನ್ನು ನಿರ್ಮಿಸಲು ಉದ್ದೇಶಿಸಿದೆ. ಇದರಲ್ಲಿ ಸಾಂಸ್ಕೃತಿಕ ಭವನ, ಪುಸ್ತಕ ಮಾರಾಟ ಮಳಿಗೆ, ಯೋಗ ತರಬೇತಿ ಕೊಠಡಿ, ಕಂಪ್ಯೂಟರ್ ಕಲಿಕಾ ಕೇಂದ್ರ ಇತ್ಯಾದಿಗಳು ನಡೆಯಲಿವೆ. ಇದು ಗೋವಾ ರಾಮಕೃಷ್ಣ ಮಿಷನ್ನಿನ ನಗರ ಕೇಂದ್ರವಾಗಿದೆ.

**2.ರಾಮಕೃಷ್ಣ-ವಿವೇಕಾನಂದ ಸಮಿತಿಗೆ ಸಮೀಪವಿರುವ ಜಮೀನಿನಲ್ಲಿ:** ಸಮಿತಿಗೆ ಸಮೀಪದಲ್ಲಿ ಭಕ್ತರೊಬ್ಬರು ಮಿಷನ್ನಿಗೆ 371ಮೀ.ಚದರಳತೆಯ ಭೂಮಿಯನ್ನು ನೀಡಿದ್ದು, ಇಲ್ಲಿ ಮಿಷನ್ 10 ಕೋಣೆಗಳಿಂದ ಕೂಡಿದ ಕಚೇರಿಯ ಕಟ್ಟಡವನ್ನು ನಿರ್ಮಿಸಲು ಉದ್ದೇಶಿಸಿದೆ. ಮುಂದೆ ಈ ಭೂಮಿಯು ಸಮಿತಿಯಿಂದ ಹಸ್ತಾಂತರಿಸಲಾಗುವ ಭೂಮಿಯೊಂದಿಗೆ ವಿಲೀನಗೊಂಡು, ಒಂದೇ ವಠಾರದಲ್ಲಿ ನೆಲೆಗೊಳ್ಳುವುದು. ಇಲ್ಲಿ ಒಂದು ಸಣ್ಣ ಪ್ರಾರ್ಥನಾ ಮಂದಿರ, ಪುಸ್ತಕ ಮಾರಾಟ ಮಳಿಗೆ ಹಾಗೂ ಕಚೇರಿ ಇವನ್ನು ನಿರ್ಮಿಸಲಾಗುವುದು.

**3. ಸಮಿತಿ ಹಸ್ತಾಂತರಿಸುವ ಆರು ಎಕರೆ ಜಮೀನಿನಲ್ಲಿ** ಹಂತಹಂತವಾಗಿ ಈ ಸೇವಾಕಾರ್ಯಗಳನ್ನು ಕೈಗೊಳ್ಳಲು ಮಿಷನ್ ಯೋಜನೆ ಹಾಕಿಕೊಂಡಿದೆ: * ಶ್ರೀರಾಮಕೃಷ್ಣರ ವಿಶ್ವಭ್ರಾತೃತ್ವ ಮಂದಿರ * ಚಿಕಿತ್ಸಾಲಯ * ಬಾಲಕ ಸಂಘ * ಆಧ್ಯಾತ್ಮಿಕ ಶಿಬಿರ * ಬಾಲಕರ ವಿದ್ಯಾರ್ಥಿ ನಿಲಯ * ಸಾಧು ನಿವಾಸ * ಸಾಂಸ್ಕೃತಿಕ ಭವನ

ಈ ಯೋಜನೆಗಳಿಗೆ ತಗಲುವ ವೆಚ್ಚ: ಯೋಜನೆ 1– 200 ಲಕ್ಷ ರೂ.; ಯೋಜನೆ 2– 66ಲಕ್ಷ ; ಯೋಜನೆ 3– ಪ್ರಗತಿಯಲ್ಲಿದೆ.



PROJECT -1 VIVEKANANDA CULTURAL CENTRE

PROSPECTIVE VIEW OF THE UPCOMING BUILDING

SAMITI'S SIX ACRES OF LAND

ಸ್ನೇಹಿತರೇ, ಈ ಎಲ್ಲ ಯೋಜನೆಗಳ ಒಟ್ಟು ಮೊತ್ತವನ್ನು ಸದ್ಯದಲ್ಲೇ ನಾವು ಸಂಪೂರ್ಣವಾಗಿ ಅಂದಾಜಿಸಲಿದ್ದೇವೆ. ಒಟ್ಟಿನಲ್ಲಿ, ಅನೇಕ ಕೋಟಿ ರೂ. ಮೊತ್ತದ ಈ ಯೋಜನೆಗಳಿಗೆ ಎಲ್ಲ ಭಕ್ತರ, ಹಿತೈಷಿಗಳ ಹಾಗೂ ಉದಾರ ದಾನಿಗಳ ನೆರವು ಅತ್ಯಂತ ಅಗತ್ಯವಾಗಿದೆ. ಈ ಮಹಾಕಾರ್ಯದಲ್ಲಿ ನೆರವಾಗುವ ಎಲ್ಲರಿಗೂ ದಿವ್ಯತ್ರಯರ ಕೃಪಾಶೀರ್ವಾದಗಳು ಲಭಿಸುವುದೆಂಬ ನಂಬಿಕೆ ನಮ್ಮದು. ತಾವು ನೀಡಬಯಸುವ ದೇಣಿಗೆಯ ಮೊತ್ತವನ್ನು ನಗದು/ಚೆಕ್/ಡಿ.ಡಿ.ಮೂಲಕ '**RAMAKRISHNA MISSION, PONDA**' ಹೆಸರಿನಲ್ಲಿ ತೆಗೆದು, ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ವಿನಂತಿ:

**Ramakrishna Mission, Ponda, Goa (Riverside Centre),** Parsol, P.O.: Khandepar Branch Office, Inside from Khursakade Bus Stop, After Chowgule Maruti Service, **PONDA, GOA - 403 406.** Mob: 09414042638

**ನೇರ ಬ್ಯಾಂಕ್ ಖಾತೆಗೆ ಹಣ ವರ್ಗಾಯಿಸಬಹುದು. ಅದಕ್ಕೆ ಅಗತ್ಯವಾದ ವಿವರಗಳು ಹೀಗಿವೆ:**

Account Name: **Ramakrishna Mission, Ponda**
Type of A/c: **Saving Account**

**All donations are exempt under section 80G of Income Tax Act.**
**Our Pan No: AAAAR1077P**

**Bank of India,** Panduranga Plaza, Tisk, Usgao, Ponda, Goa-403406.
Ph: 0832-2345651/52
**IFSC/RTGS Code: BKID0001037**
**MICR Code: 403013038**
**A/c No: 103710110005784**

**Punjab National Bank,** Ponda, Goa - 403401,
Ph: 0832-2317171
**IFSC /RTGS Code: PUNB0684700**
**MICR Code: 403024006**
**A/c No: 6847000100021760**

ಸಂಪಾದಕೀಯ

# ಬೆಳ್ಳಕ್ಕಿ ಸಾಲಿನ ಹಿಂದೆ..

### ಪಾಶ್ಚಿಮಾತ್ಯರ ಕಣ್ಣಿನಲ್ಲಿ

ಸ್ವಾಮಿ ವಿವೇಕಾನಂದರ ಜೀವನದಲ್ಲಿ ಒಂದು ಘಟನೆ ಬರುತ್ತದೆ. ಅವರು ಕಾಲೇಜಿನಲ್ಲಿ ಓದುತ್ತಿದ್ದಾಗ ಪ್ರಿನ್ಸಿಪಾಲ್ ವಿಲಿಯಂ ಹೇಸ್ಟಿಯವರು ವರ್ಡ್ಸ್‌ವರ್ತ್ ಎಂಬ ಆಂಗ್ಲ ಕವಿಯ ವಿಚಾರವಾಗಿ ಮಾತನಾಡುತ್ತಾ, ''ಅವನು ಪ್ರಕೃತಿ ಸೌಂದರ್ಯವನ್ನು ನೋಡುತ್ತ ಕಾಲದೇಶಗಳ ಪರಿಧಿಯಾಚೆಗಿನ ಒಂದು ಬಗೆಯ ಸಮಾಧಿ ಸ್ಥಿತಿಯಲ್ಲಿ ತಲ್ಲೀನನಾಗಿಬಿಡುತ್ತಿದ್ದ'' ಎಂದರು. ಅವರು ಮುಂದುವರಿದು, ''ಶುದ್ಧ ಮನಸ್ಸು ಒಂದು ವಸ್ತುವಿನ ಮೇಲೆ ಏಕಾಗ್ರವಾದಾಗ ಇಂತಹ ಸ್ಥಿತಿ ಬರುವುದು. ಈ ಕಾಲದಲ್ಲಿ ಇಂಥ ಅನುಭವಗಳು ಅಪರೂಪ. ನಾನು ಅಂಥ ಧ್ಯಾನಾವಸ್ಥೆಯನ್ನು ಪಡೆದ ವ್ಯಕ್ತಿಯೊಬ್ಬರನ್ನು ನೋಡಿದ್ದೇನೆ. ಅವರು ದಕ್ಷಿಣೇಶ್ವರದಲ್ಲಿರುವ ಶ್ರೀರಾಮಕೃಷ್ಣ ಪರಮಹಂಸರು'' ಎಂದರು. ಅಸಾಧಾರಣ ಬುದ್ಧಿವಂತಿಕೆಯ, ಸದಾ ಜಾಗೃತ ಮನಸ್ಥಿತಿಯ, ವಿಮರ್ಶಕ ಸ್ವಭಾವದ ಸ್ವಾಮೀಜಿ (ಆಗ ನರೇಂದ್ರ) ವಿಲಿಯಂ ಹೇಸ್ಟಿಯವರ ಈ ಮಾತುಗಳನ್ನು ಹೇಗೆ ಗ್ರಹಿಸಿರಬಹುದು! ಪಾಶ್ಚಾತ್ಯ ಪ್ರಾಧ್ಯಾಪಕರೊಬ್ಬರ ಕಣ್ಣಿನಲ್ಲಿ ಭಾರತೀಯ ಸಂತರೊಬ್ಬರ ಸಮಾಧಿಯ ಚಿತ್ರಣ ಎಂತಹ ಕುತೂಹಲವನ್ನು ಮೂಡಿಸಿರಬಹುದು ಎಂದು ನಾವು ಊಹಿಸಿಕೊಳ್ಳಬೇಕು. ಭಗವಂತನ ಸಾಕ್ಷಾತ್ಕಾರ ಪಡೆದ ವ್ಯಕ್ತಿಯೊಬ್ಬರ ಭೇಟಿಗಾಗಿ ಆಗ ನರೇಂದ್ರನ ಹೃದಯ ಅತಿಯಾಗಿ ಹಂಬಲಿಸುತ್ತಿತ್ತು. ಮುಂದೆ ಇತರರ ಸಲಹೆಯಂತೆ ಅವನು ಶ್ರೀರಾಮಕೃಷ್ಣರ ಬಳಿಗೆ ಹೋದ; ಅವರ ಭೇಟಿಯ ಬಳಿಕ ಅವನ ಜೀವನವೇ ಬದಲಾಯಿತು. ಅವೆಲ್ಲವೂ ಈಗ ಚಾರಿತ್ರಿಕ ಘಟನೆಗಳು.

### ಪರೀಕ್ಷಕ ದೃಷ್ಟಿ

ವರ್ಡ್ಸ್‌ವರ್ತ್ ಕವಿಯ ಅನುಭವ ಯಾವ ಬಗೆಯದೋ ಹೇಳಲಾಗದು. ಆದರೆ ಶ್ರೀರಾಮಕೃಷ್ಣರ ಭಾವ, ಸಮಾಧಿ ಇವುಗಳೆಲ್ಲ ಭಾರತೀಯ ಆಧ್ಯಾತ್ಮಿಕ ಇತಿಹಾಸದಲ್ಲೇ ಅಭೂತಪೂರ್ವವಾದ ಸಂಗತಿಗಳೆನ್ನಬಹುದು. ಸ್ವಾಮಿ ವಿವೇಕಾನಂದರೇ ಮೊದಲಾಗಿ ಇನ್ನಿತರರೂ ಅವರ ಸಮಾಧಿಯನ್ನು ಕುರಿತು ಸಂದೇಹಪಟ್ಟಿದ್ದರು. ಶ್ರೀರಾಮಕೃಷ್ಣರ ಜೀವಿತಕಾಲದಲ್ಲಿ ಆಧುನಿಕ ವೈದ್ಯರುಗಳು, ವಿದ್ವಾಂಸರು ಹಾಗೂ ದಾರ್ಶನಿಕರು ಅವರ ಅಲೌಕಿಕ ಅನುಭವಗಳನ್ನು ಒರೆಗೆ ಹಚ್ಚಿ ನೋಡಿದ್ದರು; ಕೆಲವರು ಶಾಸ್ತ್ರಗಳಲ್ಲಿ ಹೇಳಿರುವ ಸಮಾಧಿಯ ಅನುಭವ ಇವರ ಅವಸ್ಥೆ ತಾಳೆಯಾಗುವುದನ್ನು ಗುರುತಿಸಿದರು. ಇನ್ನು ಕೆಲವರು 'ಇವರ ಅನುಭವ ನಮ್ಮ ಪರೀಕ್ಷೆಯ ಮಿತಿಯನ್ನು ಮೀರಿದೆ' ಎಂದು ಸುಮ್ಮನಾದರು. ಒಟ್ಟಿನಲ್ಲಿ ಅವರ ಸಮಾಧಿ, ಮೈಮರೆಯುವಿಕೆ ಕೇವಲ ದೈಹಿಕ ರೋಗ ಅಥವಾ ಮಾನಸಿಕ ಭ್ರಾಂತಿಯಲ್ಲ, ಅದೊಂದು ಅಸಾಧಾರಣ ಅನುಭೂತಿ ಎಂಬುದನ್ನು ಎಲ್ಲರೂ ಕಂಡುಕೊಂಡರು. ಆದರೆ ಅವರ ಸಮಾಧಿ, ಭಾವ, ದರ್ಶನಗಳ ಅಗಾಧತೆ ಜಗತ್ತಿಗೆ ಅರಿವಾದುದು ಅನಂತರ; ಸ್ವಾಮಿ ವಿವೇಕಾನಂದರು ಹಾಗೂ ಇತರ ಶಿಷ್ಯಂದಿರು ಅವರ ಆಧ್ಯಾತ್ಮಿಕ ಗರಡಿಯಲ್ಲಿ ಪಳಗಿ, ಅವರ ಅಸಾಮಾನ್ಯ ವ್ಯಕ್ತಿತ್ವದ ವಿಶ್ವರೂಪ ದರ್ಶನವನ್ನು ಹೊಂದಿದಾಗ. ಹಿಂದೂ ಶಾಸ್ತ್ರಗ್ರಂಥಗಳಲ್ಲಿ ವಿವರಿಸಿರುವ ಆಧ್ಯಾತ್ಮಿಕ ಅನುಭೂತಿಗಳೆಲ್ಲವೂ ನಿಜವಾದುವೇ ಎಂದು ಅವರ ನೇರ ಶಿಷ್ಯರಲ್ಲೊಬ್ಬರಾದ ಸ್ವಾಮಿ ಶಾರದಾನಂದರು ತಮ್ಮ ಗ್ರಂಥ 'ಶ್ರೀರಾಮಕೃಷ್ಣಲೀಲಾಪ್ರಸಂಗ' ದಲ್ಲಿ ಬರೆಯುತ್ತಾರೆ.

### ಅನುಭವದ ಎತ್ತರ

ಶ್ರೀರಾಮಕೃಷ್ಣರ ಜೀವನದುದ್ದಕ್ಕೂ ಅಸಂಖ್ಯಾತ ಆಧ್ಯಾತ್ಮಿಕ ಅನುಭವಗಳು ಉಂಟಾಗುತ್ತವೆ; ಅವುಗಳ ವಿವರಣೆ ಅವರ ಜೀವನ ಚರಿತ್ರೆಯಲ್ಲೂ, ಅವರದೇ ಮಾತುಗಳಲ್ಲೂ ಕಂಡುಬರುತ್ತವೆ. ಇವುಗಳನ್ನೆಲ್ಲ ಜಗತ್ತು ಅಚ್ಚರಿಯಿಂದ ನೋಡಬೇಕು; ಜನರು ತಮಗೆ ಅರ್ಥವಾದಷ್ಟನ್ನು ಭಾವಿಸುತ್ತ ಆ ಮಹಾಪುರುಷನ ದಿವ್ಯ ಸ್ಮರಣೆಯಿಂದ ಪುನೀತರಾಗಬೇಕು. ಒಂದೊಂದು ಅನುಭವವನ್ನೇ ತೆಗೆದುಕೊಂಡು ಆಳವಾಗಿ ಆಲೋಚಿಸಿದರೂ ಸಾಕು, ನಮ್ಮ ಮನಸ್ಸು ಬುದ್ಧಿ, ಹೃದಯಗಳು ಎತ್ತರಕ್ಕೇರುತ್ತವೆ; ಅರಿಯದ ಅಲೌಕಿಕ ನೆಲೆಯನ್ನು ಸ್ಪರ್ಶಿಸಬಯಸುತ್ತದೆ. 'ಇಂದಿನ ಭಾವ

ನೆಯೇ ನಾಳಿನ ಅನುಭವ' ಎನ್ನುತ್ತಾರೆ; ಭಗವತ್ಕೃಪೆಯ ಕ್ಷಣ ಎಂಥ ಮನಸನ್ನೂ ದಿವ್ಯತೆಗೆ ಏರಿಸಬಲ್ಲುದಲ್ಲವೆ? ಶ್ರೀರಾಮಕೃಷ್ಣರ ಒಂದೇ ಒಂದು ಕ್ಷಣದ ನೆನಪೂ ನಮ್ಮ ದೇಹ, ಮನಸ್ಸು ಹೃದಯಗಳನ್ನು ಪಾವಿತ್ರ್ಯದ ಅಮೃತಜಲದಲ್ಲಿ ಮುಳುಗಿಸುವುದು.

### ಶ್ರೀರಾಮಕೃಷ್ಣರ ಮೊದಲ ಸಮಾಧಿಯ ಅನುಭವ

ಶ್ರೀರಾಮಕೃಷ್ಣರ ಬಾಲ್ಯದ ಹೆಸರು ಗದಾಧರ. ಬಾಲಕ ಗದಾಧರ ಮೊದಲಿನಿಂದಲೂ ವಿಲಕ್ಷಣ ಹುಡುಗ. ಜಗತ್ತಿನ ವಿವಿಧ ದೃಶ್ಯಗಳನ್ನು, ಜನರ ಹಾವಭಾವಗಳನ್ನು ನೋಡುತ್ತ ವೈಮರೆಯುವನು; ಭಾವಪೂರ್ಣವಾಗಿ ಹಾಡುತ್ತ ಆನಂದಪಡುವನು. ಜನರ ಮುಂದೆ ರೋಚಕವಾಗಿ ದೇವದೇವತೆಗಳ ಕತೆ ಹೇಳುತ್ತ ರಂಜಿಸುವನು. ಅವನಿಗೆ ಆಗ ಆರು ಅಥವಾ ಏಳು ವರ್ಷ ವಯಸ್ಸಾಗಿತ್ತು. ಆಗ ಅವನಿಗೆ ಮೊದಲ ಸಮಾಧಿಯ ಅನುಭವವುಂಟಾಯಿತು.

ಆಗ ಜೂನ್ ಅಥವಾ ಜುಲೈ ತಿಂಗಳು. ತನ್ನ ಹುಟ್ಟೂರಾದ ಕಾಮಾರಪುಕುರ ಗ್ರಾಮದ ವಿಶಾಲ ಬಯಲಿನಲ್ಲಿ, ಭತ್ತದ ಗದ್ದೆಗಳ ನಡುವಿನ ತೆವರಿನಲ್ಲಿ ನಡೆಯುತ್ತಾ ಬರುತ್ತಿದ್ದ. ಕೈಯಲ್ಲಿ ಕಡಲೆಪುರಿ ಪೊಟ್ಟಣ; ತಿನ್ನುತ್ತಾ ಬರುತ್ತಿದ್ದ. ಮೇಲೆ ನೋಡಿದ, ಆಗಸವೆಲ್ಲ ಕಾರ್ಮುಗಿಲು ಆವರಿಸಿಕೊಂಡಿದೆ. ಬರಬರುತ್ತಾ ಮೋಡ ಇಡೀ ಆಕಾಶವನ್ನು ವ್ಯಾಪಿಸಿಕೊಂಡಿತು. ಇದ್ದಕ್ಕಿದ್ದಂತೆ ಎಲ್ಲಿಂದಲೋ ಬೆಳ್ಳಕ್ಕಿಗಳ ಸಾಲು ಹಾರಿ ಬಂತು. ಕಪ್ಪು ಮೋಡಗಳ ಹಿನ್ನೆಲೆಯಲ್ಲಿ ಬೆಳ್ಳಕ್ಕಿಗಳ ಸಾಲು ಹುಡುಗನ ಹೃನ್ಮನವನ್ನೆಲ್ಲ ತುಂಬಿಕೊಂಡಿತು. ವಿಶ್ವಸೃಷ್ಟಿಯ ಸೀಮಿತ ಸೌಂದರ್ಯದಾಚೆಯ ಅನಂತ ಅಸ್ತಿತ್ವದತ್ತ ಅವನ ಗಮನವನ್ನು ಆ ದೃಶ್ಯ ಸೆಳೆದೊಯ್ದಿರಬೇಕು; ಭಾವಪರವಶನಾದ ಹುಡುಗ ಅಲ್ಲೇ ಪ್ರಜ್ಞೆತಪ್ಪಿ ಬಿದ್ದುಬಿಟ್ಟ. ಕೈಯಲ್ಲಿದ್ದ ಕಡಲೆಪುರಿ ಸುತ್ತಲೂ ಚೆಲ್ಲಿತು. ಹಳ್ಳಿಯ ಜನ ಗದ್ದೆ ತೆವರಿನಲ್ಲಿ ಬಿದ್ದ ಹುಡುಗನನ್ನು ನೋಡಿ, ಎತ್ತಿಕೊಂಡು ಮನೆಗೆ ಕರೆತಂದರು. ಆಗ ತನಗಾದ ಅನುಭವದಲ್ಲಿ ತಾನು ಅನಿರ್ವಚನೀಯವಾದ ಆನಂದವನ್ನು ಅನುಭವಿಸಿದೆ ಎಂದು ಶ್ರೀರಾಮಕೃಷ್ಣರೇ ಮುಂದೆ ಹೇಳಿಕೊಂಡಿದ್ದಾರೆ.

### ಅನುಭವದ ಒರೆಗಲ್ಲು

ಜಗತ್ತಿನಲ್ಲಿ ಬಾಲ್ಯಕಾಲವೆಂಬುದು ಒಂದು ಅಚ್ಚರಿ, ವಿಸ್ಮಯ, ಹಲವು ಭಾವಗಳ ಉದಯ ಕಾಲ. ಅದನ್ನು ನೆನೆದಷ್ಟೂ ಮನಸ್ಸು ಮುದಗೊಳ್ಳುವುದು; ಅಷ್ಟೇ ಅಜ್ಞಾತ ಲೋಕದತ್ತ ನಮ್ಮ ಮನಸ್ಸು ಜಾರುವುದು. ಆದರೆ ಈ ಅದ್ಭುತ, ವಿಸ್ಮಯಗಳೆಲ್ಲ ಅರಿವಿಗೆ ಬರುವಾಗ ನಾವು ಪ್ರೌಢರಾಗಿಬಿಟ್ಟಿರುತ್ತೇವೆ; ನಾವು ಬೆಳೆದಷ್ಟೂ ಬಾಲ್ಯಕಾಲ ಕಾಡತೊಡಗುತ್ತದೆ ಎನ್ನುವುದು ನಿಜ. ಮುಗ್ಧತೆಯ ಆ ಶಾಂತ ಮನಸ್ಸಿಗೂ, ಜನ್ಮತಃ ಪರಿಪೂರ್ಣತೆಯನ್ನು ಧರಿಸಿಕೊಂಡೇ ಬಂದಿರುವ ಶ್ರೀರಾಮಕೃಷ್ಣರಂತಹ ಅವತಾರಪುರುಷರ ಎಳೆಯ ಮನಸ್ಸಿಗೂ ಅದೆಷ್ಟು ವ್ಯತ್ಯಾಸವೋ ಹೇಳಬಲ್ಲವರಾರು? ಆದ್ದರಿಂದ ನಮ್ಮ ಬಾಲ್ಯದ ಅನುಭವಗಳ ಹಿನ್ನೆಲೆಯಿಂದ ಇಂಥ ಮಹಾತ್ಮರ ಬಾಲ್ಯದ ಅನುಭವವನ್ನು ಅರ್ಥಮಾಡಿಕೊಳ್ಳಲಾಗದು. ಕೇವಲ ಊಹೆ, ಕಲ್ಪನೆಗಳ ಮೂಲಕ ನಮ್ಮ ಅನುಭವಗಳ ಪರಿಧಿಯನ್ನು ವಿಸ್ತಾರಗೊಳಿಸುವ, ಶ್ರೀಮಂತಗೊಳಿಸುವ ಪ್ರಯತ್ನವನ್ನಂತೂ ಮಾಡಬಹುದು.

ನಿಸರ್ಗದ ಅಸಾಧಾರಣ ದೃಶ್ಯಗಳು ನಮ್ಮಲ್ಲಿ ವಿವಿಧ ಭಾವನೆಗಳು ಸ್ಫುರಿಸುವಂತೆ ಮಾಡುವುದು ಸಹಜ. ಅದರಲ್ಲೂ ವಿಶಾಲವಾದ, ಬೃಹತ್ತಾದ, ವಿಸ್ತಾರವಾದ ಸಂಗತಿಗಳು ನಮ್ಮಲ್ಲಿ ಭವ್ಯತೆಯ, ಅಚ್ಚರಿಯ ಭಾವವನ್ನು ಮೂಡಿಸುತ್ತದೆ. ಕೊನೆಯಿಲ್ಲದ ಆಕಾಶ, ದಿಗಂತದಲ್ಲಿ ಕೊನೆಗೊಳ್ಳದೆ ಮುಂದಕ್ಕೆ ವ್ಯಾಪಿಸಿರುವ ಸಾಗರ, ಔನ್ನತ್ಯದಲ್ಲಿ ಎಲ್ಲವನ್ನೂ ಮೀರಿ ನಿಂತಿರುವ ಹಿಮಾಲಯ ಪರ್ವತಶ್ರೇಣಿ, ವಿಸ್ತಾರವಾಗಿ ಚದರಗಟ್ಟಲೆ ಹರಡಿರುವ ಅರಣ್ಯರಾಜಿ – ಈ ದೃಶ್ಯಗಳೆಲ್ಲ ಜನಸಾಮಾನ್ಯರೆಲ್ಲರ ಹೃದಯವನ್ನು ಹೊಕ್ಕು, ಮುಗ್ಧಭಾವವನ್ನು ಅರಳಿಸುತ್ತವೆ. ಅನಂತದೆಡೆಗೆ ಚಾಚಿರುವ ಆ ನೋಟಗಳಲ್ಲಿ ನಾವು ಕೊನೆಯಿಲ್ಲದ ಸುಖಸಮೃದ್ಧಿಯನ್ನು, ತುಂಬಿತುಳುಕುವ ಆನಂದವನ್ನು ಅರಸುತ್ತೇವೆ. ಕಳೆದು ಹೋಗುವ, ಕೆಲವೇ ಕ್ಷಣದಲ್ಲಿ ಇಲ್ಲದಾಗುವ ಸಾಮಾನ್ಯ ಸಂಗತಿಗಳ ಒಡನಾಟದಿಂದ ಬೇಸತ್ತ ಮನಸ್ಸು ಒಮ್ಮಿಂದೊಮ್ಮೆಗೆ ವಿಸ್ತಾರವಾದದ್ದನ್ನು ಕಂಡಾಗ 'ಅಬ್ಬಾ!' ಎಂದು ಬೆರಗಾಗಿ, ಅದರಲ್ಲಿ ಮೈಮರೆಯುತ್ತದೆ. ನಾವು ಹಾತೊರೆಯುವ ಪೂರ್ಣತೆ ಇಲ್ಲಿದೆ ಎಂದು ಗುರುತಿಸುತ್ತದೆ – ಅದರ ಅರಿವು ನಮಗಾಗದಿದ್ದರೂ ಕೂಡ. ಆಧ್ಯಾತ್ಮಿಕ ಭಾವನೆಗಳ ಹಿನ್ನೆಲೆಯಿಲ್ಲದಿದ್ದರೂ ಹೀಗೆ ಅನಂತದ ಭವ್ಯತೆಯನ್ನು ಆಸ್ವಾದಿಸುವುದು ಸಾಮಾನ್ಯರೆಲ್ಲರ ಸಹಜ ಕಾರ್ಯ; ದಿವ್ಯತೆಯೇ ಮೈದಳೆದು, ಗದಾಧರನ ರೂಪದಲ್ಲಿ ನಿಂತು, ಗದ್ದೆ ತೆವರಿನಲ್ಲಿ ಅದ್ಭುತ ದೃಶ್ಯವೊಂದನ್ನು ಕಂಡಾಗ ಅವನಿಗಾದ ಅನುಭವದ ತೀವ್ರತೆಯೂ ಅಷ್ಟೇ ಗಾಢ. ಅವತಾರ ಪುರುಷನೊಬ್ಬನ ಬಾಲ್ಯವೂ ಅಷ್ಟೇ ಅಗೋಚರ.

### ಮಾತು, ಮನಸ್ಸುಗಳಾಚೆ

ಇಂದ್ರಿಯ, ಮನಸ್ಸು, ಬುದ್ಧಿ ಇವುಗಳನ್ನು ಮೀರಿದ ಅನುಭವವನ್ನು ಮಾತಿನಿಂದ ವಿವರಿಸಲಾಗದು ಎನ್ನುತ್ತಾರೆ. ಸಮಾಧಿಯ ಅನುಭವ ಮಾತಿಗೆ ನಿಲುಕದ್ದು ಎಂದು ಹಲವು ಸಂದರ್ಭಗಳಲ್ಲಿ ಶ್ರೀರಾಮಕೃಷ್ಣರೇ ಹೇಳುತ್ತಾರೆ. ಸಾಕ್ಷಾತ್ಕಾರ ಹೊಂದಿದ ವ್ಯಕ್ತಿ ಕೂಡ ಅಂಥ ಅನುಭವವನ್ನು ಪಡೆಯುವಾಗ ತನ್ನ ಅನುಭವದ ಸೀಮಿತ ವ್ಯಾಪ್ತಿಯನ್ನು ಮೀರಿ ಹೋಗುತ್ತಾನೆ; ಆ ಅನುಭವ ಮುಗಿದು, ತನ್ನ ಸಹಜಾವಸ್ಥೆಗೆ ಮರಳುವಾಗ ಮತ್ತೆ ಅದೇ ಸೀಮಿತತೆ ಅವನನ್ನು ಆವರಿಸುತ್ತದೆ. ಇಂದ್ರಿಯ, ಮನಸ್ಸು, ಬುದ್ಧಿ, ಮಾತು – ಇವೆಲ್ಲವೂ ಆ ಸೀಮಿತತೆಯ ಒಳಗೆಯೇ ಇರುವುದರಿಂದ, ಅಂಥ ಅತೀತ ಅನುಭವ ನಮ್ಮ ಅರಿವಿಗೆ ನಿಲುಕಲಾರದ್ದು ಎನ್ನುತ್ತಾರೆ. ಹೀಗೆ ಸಮಾಧಿಯ ಅಗೋಚರ ನೆಲೆ ದೂರವೇ ಉಳಿಯುತ್ತದೆ. ನಮ್ಮ ಅರಿವಿಗೆ ಕಂಡುಬರುವುದು ಕೇವಲ ಅದರ ಪರಿಣಾಮ ಮಾತ್ರ.

## ಜೀವನ ರಂಗಭೂಮಿ

ನಾಟಕದ ಹೋಲಿಕೆಯಿಂದ ಇದನ್ನು ಸುಲಭವಾಗಿ ವಿವರಿಸಬಹುದು. ನಿಜಜೀವನಕ್ಕೂ ನಾಟಕಕ್ಕೂ ಏನು ವ್ಯತ್ಯಾಸ? ನಿಜಜೀವನದಲ್ಲಿ ಎಲ್ಲವೂ ವಾಸ್ತವ. ಇಲ್ಲಿ ನಗುತ್ತೇವೆ, ಅಳುತ್ತೇವೆ, ಆನಂದಿಸುತ್ತೇವೆ. ಇವೆಲ್ಲಾ ನಾಟಕದಲ್ಲಿ ನಟನೆ ಮಾತ್ರ; ನಿಜವಲ್ಲ. ನಿಜಜೀವನದಲ್ಲಿ ಇರುವಂತೆಯೇ ನಾಟಕದಲ್ಲೂ ಸನ್ನಿವೇಶಗಳಿವೆ, ವ್ಯಕ್ತಿಗಳಿದ್ದಾರೆ, ಕಥೆಯಿದೆ, ವಿವಿಧ ರಸ-ಭಾವಗಳಿವೆ. ಆದರೆ ಅಲ್ಲಿ ಯಾವುದೂ ನಿಜವಲ್ಲ. ಆದರೂ ನಾಟಕ ನೋಡಿ ನಾವು ನಗುತ್ತೇವೆ, ಅಳುತ್ತೇವೆ, ದುಃಖಿಸುತ್ತೇವೆ. ಇದೇಕೆ? ನಿಜಜೀವನದಲ್ಲಿ ಪ್ರತಿಯೊಂದು ಭಾವವೂ ಸತ್ಯ. ಆದರೆ ನಾಟಕದಲ್ಲಿ 'ಭಾವ' ಎಂಬುದೇ ಇಲ್ಲ; ಅದನ್ನು ಸೃಷ್ಟಿ ಮಾಡಲಾಗುತ್ತದೆ. ನಾಟಕಕಾರ ಸೃಷ್ಟಿಸಿದ ಸನ್ನಿವೇಶ, ಪಾತ್ರಗಳ ಅಭಿನಯ, ರಂಗಸಜ್ಜಿಕೆ, ಸಂಗೀತ ಇವುಗಳಿಂದ ಹೊಸ ಜಗತ್ತೇ ಸೃಷ್ಟಿಯಾಗುತ್ತದೆ. ಅದೆಲ್ಲವೂ ಸುಳ್ಳು ಎಂಬುದನ್ನು ಮರೆತು ಪ್ರೇಕ್ಷಕನು ನಾಟಕದಲ್ಲಿ ಒಂದಾಗುತ್ತಾನೆ; ಅದರಲ್ಲಿರುವುದೆಲ್ಲ ನಿಜವೆಂಬಂತೆ ಅನುಭವಿಸುತ್ತಾನೆ.

ಶ್ರೀರಾಮಕೃಷ್ಣರ ಸಮಾಧಿಯ ಅನುಭವ ನಮಗೆ ಅಗೋಚರ; ನಮ್ಮ ಪಾಲಿಗೆ ಅಗಮ್ಯ. ಆದರೆ ಅಲ್ಲಿನ ಸನ್ನಿವೇಶ, ದೃಶ್ಯಾವಳಿ, ಹಕ್ಕಿ ಹಾರಿ ಬಂದ ಘಟನೆ, ಅನಂತರ ಉಂಟಾದ ಅನುಭವ, ಪ್ರಜ್ಞೆ ತಪ್ಪಿ ಬಿದ್ದುಬಿಟ್ಟ ವಿಚಾರ – ಇವೆಲ್ಲ ನಮ್ಮ ಅರಿವಿಗೆ ನಿಲುಕುವಂಥದು. ಇವೆಲ್ಲವೂ ನೀಡುವ ಸೂಚನೆಯಿಂದ, ಅವರಿಗಾದ ಭಾವಸಮಾಧಿಯ ಅನುಭವವನ್ನು ನಮ್ಮ ಕಲ್ಪನೆಯಲ್ಲಿ ಮೂಡಿಸಲು ಸಾಧ್ಯವಿಲ್ಲವೆ? ನಾಟಕದಲ್ಲಿ ಉಂಟಾಗುವಂತೆ – ಉಳಿದೆಲ್ಲ ಪರಿಕರಗಳಿಂದ ನಮ್ಮ ಅಂತರಂಗದಲ್ಲಿ ಭಾವ ಉತ್ಪನ್ನವಾಗುವಂತೆ – ಶ್ರೀರಾಮಕೃಷ್ಣರ ಆಳವಾದ ಆಧ್ಯಾತ್ಮಿಕ ದರ್ಶನವನ್ನು ಭಾವಿಸಿಕೊಳ್ಳಲು ಸಾಧ್ಯವಿಲ್ಲವೆ? ಮಾನವನ ಮಿತಿಗೂ, ಸಾಧಕನ ಪ್ರಯತ್ನಕ್ಕೂ ಸವಾಲೆಸೆಯುವಂತಿದೆ, ಈ ಬಗೆಯ ಆಧ್ಯಾತ್ಮಿಕ ಘಟನೆಗಳು. ಎಲ್ಲಿ ನಮ್ಮ ಊಹೆ, ತರ್ಕ, ಬುದ್ಧಿಶಕ್ತಿ ಸೋಲುವವೋ, ಅಲ್ಲಿ ನಮ್ಮ ಅಹಂಕಾರ, ಲಜ್ಜೆ, ಬಿಗುಮಾನಗಳನ್ನು ಬದಿಗೊತ್ತಿ ಅಗೋಚರ ಸತ್ಯದ, ಶಕ್ತಿಯ ಮುಂದೆ ಶರಣಾಗಬೇಕು. ಹೃದಯದ ಮೂಲ ಅರಳಿನಿಂತಾಗ ಜ್ಞಾನಸೂರ್ಯನ ಕೃಪೆ ತಾನಾಗಿ ಒಳಗಿಳಿದು ಬರುವುದು ಎಂಬ ಕಾವ್ಯಾತ್ಮಕ ಮಾತಿನಲ್ಲಿ ಆಳವಾದ ಅರ್ಥವಿದೆ.

## ಸರಳತೆಯ ಹಿಂದಿನ ಅಗಾಧತೆ

ಶ್ರೀರಾಮಕೃಷ್ಣರ ಜೀವನವೆಲ್ಲವೂ ಹೀಗೆಯೇ. ಮೇಲ್ನೋಟಕ್ಕೆ ಸರಳ, ಸಹಜ ಹಾಗೂ ಸುಲಲಿತ ಗತಿಯ ಜೀವನವೆಂಬಂತೆ ಕಂಡುಬರುವುದು, ದಡ ತುಂಬಿ ಹರಿಯುವ ನದಿಯ ಗಮನದಂತೆ. ಆದರೆ ಅದರ ಆಳ, ವೇಗ ಹಾಗೂ ಅಗಾಧತೆಯನ್ನು ಬರಿ ಮೇಲ್ಮೈಯಿಂದ ಅಳೆಯಲಾಗದು. ಅವರ ಜೀವನದಲ್ಲಿ ಕಂಡುಬರುವ ಶಿಶುಸಹಜ ಮುಗ್ಧತೆ, ಸರಳತೆಗಳ ಹಿಂದೆ ಅತ್ಯದ್ಭುತ ಭಾವಸಾಗರವಿದೆ, ಸಾಧನೆಗಳ ಶಿಖರದಲ್ಲಿ ನಿಂತು ಗಗನದೆತ್ತರಕ್ಕೆ ನೆಗೆಯುವ ಸಾಹಸಿಯ ದಾಪುಗಾಲಿನ ಹೆಜ್ಜೆಗಳಿವೆ; ಜ್ಞಾನ-ಭಕ್ತಿ-ವೈರಾಗ್ಯಪೂರಿತವಾದ ಗಾನಮಾಧುರ್ಯದ ಭಾವಸಾಂದ್ರತೆಯಿದೆ. ಇದರೊಂದಿಗೆ, ಸ್ವಾಮಿ ವಿವೇಕಾನಂದರು ಹೇಳಿರುವಂತೆ, ''ನನ್ನ ಗುರುದೇವರ ಜೀವನದ ಮತ್ತೊಂದು ಮುಖ, ಅವರಿಗೆ ಮಾನವಕೋಟಿಯಲ್ಲಿ ಇದ್ದ ಅಪಾರ ಪ್ರೇಮ. ಜೀವನದ ಅರ್ಧ ಭಾಗ ಅಧ್ಯಾತ್ಮ ಶಕ್ತಿಯನ್ನು ಶೇಖರಿಸುವುದರಲ್ಲಿ ಕಳೆಯಿತು. ಉಳಿದ ಆಯುಷ್ಯವನ್ನು ಅದನ್ನು ಹಂಚುವುದರಲ್ಲಿ ಕಳೆದರು.. ಅವರಿಗೆ ಮಾನವ ಕೋಟಿಯ ಮೇಲೆ ಅಭೂತಪೂರ್ವ ಅನುಕಂಪವಿತ್ತು. ಇವರ ಸಹಾಯವನ್ನು ಅಪೇಕ್ಷಿಸಿದ ಸಹಸ್ರಾರು ಜನರಲ್ಲಿ ಒಬ್ಬ ದೀನನನ್ನೂ ಅವರು ನಿರಾಕರಿಸಲಿಲ್ಲ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೭, ಪು.೧೪೬)* ಇಂಥ ವಿಶಾಲ ಹೃದಯ, ಅಪಾರ ಕರುಣೆ, ಮಾನವರೆಲ್ಲರನ್ನೂ ಭಗವಂತನ ಆವಿರ್ಭಾವವೆಂಬಂತೆ ಕಾಣುವ ದೃಷ್ಟಿ, ಸಾಮಾನ್ಯ ಸಾಧುಸಂತರಲ್ಲಿ ಕಂಡುಬರುವುದು ಅಪರೂಪ. ಆದರೆ ಅದು ಅವತಾರಪುರುಷರ ವಿಶೇಷ ಗುಣ. ರಾಮ, ಕೃಷ್ಣ, ಬುದ್ಧ, ಶಂಕರ, ಚೈತನ್ಯ, ಏಸು ಕ್ರಿಸ್ತ ಮೊದಲಾದ ಮಹಾಪುರುಷರ ಜೀವನವೆಲ್ಲವೂ ಒಂದೇ ವ್ಯಕ್ತಿಯಲ್ಲಿ ಎರಕಗೊಂಡರೆ ಅದೆಂಥ ಅದ್ಭುತ ದೇವತಾಮೂರ್ತಿ ನಿರ್ಮಾಣಗೊಳ್ಳುವುದು! ಈ ಹಿನ್ನೆಲೆಯಿಂದಲೂ ಶ್ರೀರಾಮಕೃಷ್ಣರ ಜೀವನದ ಅಸಾಧಾರಣ ಘಟನೆಗಳನ್ನು ಅರಿತುಕೊಳ್ಳಬೇಕು.

## ನಿರಂತರ ಸ್ಫೂರ್ತಿಯ ಸೆಲೆ

ಭಕ್ತಿಪಂಥಗಳಲ್ಲಿ ಭಗವಂತನ ಲೀಲೆಯನ್ನು ಕುರಿತು ಚಿಂತಿಸುವುದು, ಓದುವುದು, ಪ್ರವಚನ ಕೇಳುವುದು ಇವೆಲ್ಲವೂ ಆಧ್ಯಾತ್ಮಿಕ ಸಾಧನೆಯೇ ಆಗಿದೆ. ಜ್ಞಾನಮಾರ್ಗ ಅಥವಾ ವೇದಾಂತದಲ್ಲಿ ವಿವೇಕ, ವೈರಾಗ್ಯ ಪ್ರಚೋದಕವಾದ ವಿಚಾರಗಳನ್ನು ಮನನ ಮಾಡುವುದು ಕೂಡ ಒಂದು ಬಗೆಯ 'ವೇದಾಂತ ಚಿಂತನೆ'ಯೇ ಆಗಿದೆ. ಇನ್ನು ಯೋಗಮಾರ್ಗದಲ್ಲಿ ಧ್ಯಾನ-ಸಮಾಧಿಗಳ ಹಂತವನ್ನು ತಲುಪಿಸುವವರೆಗೂ, ಮಾನಸಿಕ ಸಿದ್ಧತೆಯ ಹಂತದಲ್ಲಿರುವವರು ಆಗಾಗ ಚಿಂತಿಸಿ, ವಿಶ್ಲೇಷಿಸಿ ಅರಿತುಕೊಳ್ಳಬಹುದಾದ ಆಧ್ಯಾತ್ಮಿಕ ಅನುಭೂತಿಗಳೆಂದರೆ ಶ್ರೀರಾಮಕೃಷ್ಣರಂತಹ ಮಹಾವ್ಯಕ್ತಿಗಳ ಅನುಭವಗಳು ಮಾತ್ರ. ಈ ಅರ್ಥದಲ್ಲಿ, ಎಲ್ಲ ಅಧ್ಯಾತ್ಮ ಸಾಧಕರು ಇಂಥ ಅಪೂರ್ವ ಘಟನೆಗಳ ಮೂಲಕ ಹಾದು ಹೋಗಲೇಬೇಕು. ಇವು ಸಾಧಕನ ಅಂತರಂಗದಲ್ಲಿ ಸ್ಫೂರ್ತಿಯ ಸೆಲೆಯನ್ನು ನಿರಂತರ ಚಿಮ್ಮಿಸುತ್ತವೆ. ಈ ತಿಂಗಳಲ್ಲಿ ಬರುವ ಶ್ರೀರಾಮಕೃಷ್ಣರ ಜಯಂತಿ ಇಂಥ ಅಲೌಕಿಕ ಘಟನೆಗಳ ಸ್ಮರಣ, ಮನನಗಳಿಗೆ ಒಂದು ಉತ್ತಮ ಅವಕಾಶವೊದಗಿಸುತ್ತದೆ. ದಿವ್ಯ ಶಿಶುವಾಗಿ, ಭವ್ಯ ಬಾಲಕನಾಗಿ, ಮುಂದೆ ಜಗದ್ಗುರುವಾಗಿ ಬೆಳಗಿದ ಈ ಅವತಾರಪುರುಷನ ಜೀವನ ನಮ್ಮೆಲ್ಲರ ಬದುಕಿನಲ್ಲಿ ಹೊಸ ಭರವಸೆ ತುಂಬಲಿ ಎಂದು ಪ್ರಾರ್ಥಿಸೋಣ. ❁

# ವಿವೇಕಾನಂದರು ಕಂಡ ಭವಿಷ್ಯ ಭಾರತ

ಸ್ವಾಮಿ ನಿತ್ಯಸ್ಥಾನಂದ



ಸಮಸ್ತ ಮನುಕುಲದ ಏಳಿಗೆಯನ್ನು ಭವಿಷ್ಯ ಭಾರತದ ಉನ್ನತಿಯಲ್ಲಿ ಕಂಡವರು ಸ್ವಾಮೀಜಿ. ಅದು ಆಧ್ಯಾತ್ಮಿಕ ಜಾಗೃತಿಯಿಂದ ಮಾತ್ರ ಸಾಧ್ಯವೆಂಬುದನ್ನು ಸ್ಪಷ್ಟವಾಗಿ ತಿಳಿಸಿಕೊಡುವ ಅವರ ಚಿಂತನೆಗಳನ್ನು ಕುರಿತು ವಿಶ್ಲೇಷಿಸಿರುವ ಲೇಖಕರು 'ವಿವೇಕಪ್ರಭ'ದ ಮೊದಲ ಸಂಪಾದಕರು ಹಾಗೂ ಮೈಸೂರು ಆಶ್ರಮದ ಅಧ್ಯಕ್ಷರಾಗಿದ್ದರು. ಪ್ರಸಿದ್ಧ ಪ್ರವಚನಕಾರರೂ, ಬರಹಗಾರರೂ, ಉತ್ತಮ ಚಿಂತಕರೂ ಆಗಿರುವ ಅವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ.

ಸ್ವಾಮಿ ವಿವೇಕಾನಂದರ ಜೀವನವನ್ನು ಕುರಿತು ಆಲೋಚಿಸುತ್ತಿರುವಾಗ ಮಹಾಭಾರತದ ಈ ಹೇಳಿಕೆ ನೆನಪಿಗೆ ಬರುತ್ತದೆ: **'ಮುಹೂರ್ತಂ ಜ್ವಲಿತಂ ಶ್ರೇಯಃ ನ ತು ಧೂಮಾಯಿತಂ ಚಿರಂ'** ಚಿರಕಾಲ ಹೊಗೆಯಾಡುವುದಕ್ಕಿಂತ ಕ್ಷಣಕಾಲ ಜ್ವಲಿಸಿ ಮರೆಯಾಗುವುದು ಲೇಸು. ಕೆಲವೊಮ್ಮೆ ಪ್ರಜ್ವಲಿಸುವ ಆಕಾಶಕಾಯಗಳು ಕೆಲಕಾಲ ಬೆಳಗಿ ಕಣ್ಮರೆಯಾಗುತ್ತವೆ. ಅವು ವಿಶ್ವದ ಎಲ್ಲ ಕಡೆಯೂ ಸುತ್ತುತ್ತಿದ್ದು ಒಮ್ಮೊಮ್ಮೆ ಭೂಮಿಯ ಸಮೀಪ ಬಂದು ಎಲ್ಲರ ದೃಗ್ಗೋಚರವಾಗುತ್ತವೆ. ಹಾಗೆಯೇ ವಿವೇಕಾನಂದರು ಯಾವುದೋ ಲೋಕದಿಂದ ಬಂದು, ಭೂಮಿಗೆ ಒಮ್ಮೆ ಭೇಟಿಯಿತ್ತು ಕಣ್ಮರೆಯಾದಂತೆ ಕಂಡುಬರುತ್ತದೆ. ಆದರೆ ಅವರು ಕಣ್ಮರೆಯಾದರೂ ನಮ್ಮ ಹೃದಯದಿಂದ ಮರೆಯಾಗಲಿಲ್ಲ. ''ಮೃತರ ನಿಜವಾದ ಗೋರಿ ಜೀವಿಸುವವರ ಹೃದಯ'' (The real tomb of the dead is the heart of the living) ಎನ್ನುವಂತೆ ವಿವೇಕಾನಂದರು ನಮ್ಮ ಹೃದಯದಲ್ಲಿ ಶಾಶ್ವತ ಸ್ಥಾನವನ್ನು ಪಡೆದಿರುವರು.

ವಿವೇಕಾನಂದರು ಕೇವಲ ನಮ್ಮ ಹೃದಯದಲ್ಲಿ ಮಾತ್ರ ನೆಲೆಸಿರುವುದಿಲ್ಲ, ಅವರು ಎಲ್ಲೆಲ್ಲಿಯೂ ನೆಲೆಸಿರುವರು. ಧಾರ್ಮಿಕ ಕ್ಷೇತ್ರದಲ್ಲಿ, ಸಾಮಾಜಿಕ ವ್ಯವಸ್ಥೆಯಲ್ಲಿ, ಶಿಕ್ಷಣಕ್ಷೇತ್ರದಲ್ಲಿ, ರಾಜಕೀಯ ವಲಯದಲ್ಲಿ, ವಿಶ್ವ ಚಿಂತನೆಯಲ್ಲಿ, ಎಲ್ಲೆಲ್ಲಿಯೂ ಅವರು ತಮ್ಮ ಮುದ್ರೆಯನ್ನು ಒತ್ತಿ ಹೋಗಿರುವರು. **'ಸರ್ವತಃ ಪಾಣಿ ಪಾದಂ ತತ್ ಸರ್ವತೋಽಕ್ಷಿಶಿರೋಮುಖಂ'** ಆಗಿ ಅವರು ಎಲ್ಲೆಲ್ಲಿಯೂ ವಾಸಿಸುತ್ತಿರುವರು. ಎಲ್ಲ ಜ್ಞಾನಚಕ್ಷುಗಳ ಮೂಲಕ ಅವರು ಇಣುಕಿ ನೋಡುತ್ತಿರುವರು, ಅವರ ಘನಗರ್ಜನೆಯ ಧ್ವನಿ ಎಲ್ಲೆಲ್ಲಿಯೂ ಮೊಳಗುತ್ತಿರುವುದು.

''ನಾನೊಂದು ರೂಪರಹಿತ ಧ್ವನಿ'' (I am a voice without a form) ಎಂದು ವಿವೇಕಾನಂದರು ತಮ್ಮ ಬಗ್ಗೆ ಹೇಳಿರುವರು. ಅದೊಂದು ಸನಾತನ ಧ್ವನಿ. ಪುರಾತನ ವೈದಿಕ ಋಷಿಗಳ ಅನುಭವ ಗಹ್ವರದಿಂದ ಹೊರಹೊಮ್ಮಿದ, ವಿವಿಧ ಜ್ಞಾನಶ್ರುತಿಗಳಿಂದ ಆಧುನಿಕ ಸ್ವರಮೇಳದೊಂದಿಗೆ ಧ್ವನಿಗೂಡಿಸುವ, ದಶದಿಕ್ಕುಗಳಿಂದಲೂ ಅನುರಣಿತಗೊಳ್ಳುತ್ತಿರುವ ಅಪೂರ್ವ ಧ್ವನಿ ಅದು. ಅದು ಸ್ವಲ್ಪಕಾಲ ಮಾತ್ರ (೩೯ ವರ್ಷ) ಮೂರ್ತೀಭವಿಸಿತು. ಈಗ ಮತ್ತೆ ಅಮೂರ್ತ ರೂಪದಲ್ಲಿ ಎಲ್ಲೆಲ್ಲಿಯೂ ಕೇಳಿ ಬರುತ್ತಿದೆ. ರವಿಕಿರಣವು ಪ್ರಿಸಂ ಮೂಲಕ ಹಾದುಬಂದಾಗ ವರ್ಣರಂಜಿತವಾಗಿ ಕಾಣುವಂತೆ, ಆ ಧ್ವನಿಯೂ ವಿವೇಕಾನಂದರ ಶರೀರದ ಮೂಲಕ ವಿವಿಧ ರಾಗರಾಗಿಣಿಗಳಿಂದ ಹೊರಹೊಮ್ಮಿತು.

ಆ ಧ್ವನಿಯು ವಿವೇಕಾನಂದರ ಪ್ರಖರ ರಾಷ್ಟ್ರಚಿಂತನಗಳಾಗಿಯೂ ಹೊರಹೊಮ್ಮಿತು. ಅವರನ್ನು ದೇಶಭಕ್ತ ಸಂತ, ರಾಷ್ಟ್ರಚೇತನ ಎಂದೂ ಕರೆಯಲಾಗಿದೆ. ಸೋದರಿ ನಿವೇದಿತಾ ಅವರನ್ನು ಅತ್ಯಂತ ಸೂಕ್ಷ್ಮವಾದ ಘಂಟೆಗೆ ಹೋಲಿಸುತ್ತಾರೆ. ಭಾರತಕ್ಕೆ ಸಂಬಂಧಿಸಿದ ಯಾವುದೇ ವಿಷಯವಾಗಲಿ, ಆ ಘಂಟೆಯನ್ನು ಸ್ವಲ್ಪ ಸ್ಪರ್ಶಿಸಿದರೆ ಸಾಕು, ಅದು ಝೇಂಕರಿಸುತ್ತಿತ್ತು. ದೇಶದ ಧರ್ಮ ಮತ್ತು ಸಂಸ್ಕೃತಿಯ ಬಗ್ಗೆ ಅವರಿಗೆ ಅಪಾರ ಹೆಮ್ಮೆಯಿತ್ತು. ಆಳ ಅಧ್ಯಯನದ ಮೂಲಕವೂ, ದೇಶದ ಉದ್ದಗಲ ಪರಿಭ್ರಮಣದ ಮೂಲಕವೂ ಪಡೆದ ತಲಸ್ಪರ್ಶಿ ಜ್ಞಾನವು ಅವರನ್ನು ಮಹಾದೇಶಭಕ್ತರನ್ನಾಗಿ ಪರಿವರ್ತಿಸಿತು. ಅಪಾರ ಹೆಮ್ಮೆಯಿಂದ ಭಾರತದ ಪರಮ ಶ್ರೇಷ್ಠತೆಯ ಬಗ್ಗೆ ಭಾವಪರವಶರಾಗಿ ಅವರು ನುಡಿಯುತ್ತಾರೆ: ''ಜಗತ್ತಿನಲ್ಲಿ ಯಾವುದಾದರೂ ಒಂದು ದೇಶವು ಪುಣ್ಯಭೂಮಿಯೆಂದು ಕರೆಯಿಸಿಕೊಳ್ಳಲು ಅರ್ಹವಾಗಿದ್ದರೆ,

ಜೀವಿಗಳು ತಮ್ಮ ಬಾಳಿನ ಕೊನೆಯ ಕರ್ಮವನ್ನು ಸವೆಸಲು ಬರಬೇಕಾದ ಸ್ಥಳವೊಂದಿದ್ದರೆ, ಭಗವಂತನೆಡೆಗೆ ಸಂಚರಿಸುತ್ತಿರುವ ಪ್ರತಿಯೊಂದು ಜೀವಿಯೂ ತನ್ನ ಕೊನೆಯ ಯಾತ್ರೆಯನ್ನು ಪೂರೈಸುವುದಕ್ಕೆ ಒಂದು ಕರ್ಮಭೂಮಿಗೆ ಬರಬೇಕಾಗಿದ್ದರೆ, ಯಾವುದಾದರೂ ದೇಶದಲ್ಲಿ ಮಾನವಕೋಟಿಯು ಮಾಧುರ್ಯ, ಔದಾರ್ಯ, ಪಾವಿತ್ರ್ಯ, ಶಾಂತಿ ಇವುಗಳಲ್ಲಿ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಧ್ಯಾನದಲ್ಲಿ ಹಾಗೂ ಅಂತರ್ಮುಖ ಜೀವನದಲ್ಲಿ ತನ್ನ ಪರಾಕಾಷ್ಠೆಯನ್ನು ಮುಟ್ಟಿದ್ದರೆ, ಅದು ಈ ಭರತಖಂಡವೇ ಆಗಿದೆ... ಇಲ್ಲಿದೆ ಬಾಳಿಗೆ ಹೊಸ ಬೆಳಕನ್ನು ಕೊಡುವ ಅದ್ಭುತ ಪ್ರವಾಹ; ಅನ್ಯ ದೇಶಗಳಲ್ಲಿ ಕೋಟ್ಯಂತರ ಜೀವಿಗಳ ಎದೆಯನ್ನು ದಹಿಸುತ್ತಿರುವ ಜಡವಾದ ದಳ್ಳುರಿಯ ಶಮನಕ್ಕೆ ಅದ್ಭುತ ಪ್ರವಾಹ ಇಲ್ಲಿದೆ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೩, ಪು.೩)*

ವಿವೇಕಾನಂದರ ಅತ್ಯಂತ ನೆಚ್ಚಿನ, ಅತ್ಯಂತ ಹೆಮ್ಮೆಯ ಪುಣ್ಯ ಭೂಮಿಯಾದ ಭಾರತ ಈಗ ಯಾವ ಸ್ಥಿತಿಯಲ್ಲಿದೆ? ಆಧ್ಯಾತ್ಮಿಕ ವಾಗಿಯೂ ಧಾರ್ಮಿಕವಾಗಿಯೂ ಆರ್ಥಿಕವಾಗಿಯೂ ಸಾಂಸ್ಕೃ ತಿಕವಾಗಿಯೂ ವೈಜ್ಞಾನಿಕವಾಗಿಯೂ ಪ್ರಪಂಚದಲ್ಲೇ ಶ್ರೇಷ್ಠ ಮಟ್ಟದ ದೇಶವಾಗಿದ್ದ ಭಾರತ ಈಗ ಎಂಥ ಅವನತಿಯ ಸ್ಥಿತಿ ಯಲ್ಲಿದೆ! ಹಿಂದಿನ ವೈಭವವನ್ನು ನಂಬಲಾಗದಷ್ಟು ಕೆಳಮಟ್ಟಕ್ಕೆ ಇಳಿದಿದೆ. ನೂರಾರು ವರ್ಷಗಳ ಪರಕೀಯ ಆಳ್ವಿಕೆಯಿಂದ ಭಾರ ತೀಯರು ತಮ್ಮ ಸ್ವಾಭಿಮಾನವನ್ನು ಕಳೆದುಕೊಂಡರು, ತಮ್ಮ ಹಿಂದಿನ ವೈಭವವನ್ನು ಮರೆತರು, ಕೀಳರಿಮೆಯ ಅಧಃಪಾತಾಳಕ್ಕೆ ಇಳಿದರು, ತಮ್ಮ ಧರ್ಮ ಸಂಸ್ಕೃತಿಯನ್ನೇ ಕೀಳಾಗಿ ಕಾಣುವ ಮನಃಸ್ಥಿತಿಯನ್ನು ಪಡೆದರು. ವಿವೇಕಾನಂದರು ಹೇಳಿರುವಂತೆ, ಒಬ್ಬ ವ್ಯಕ್ತಿಯಾಗಲಿ, ಜನಾಂಗವಾಗಲಿ ತನ್ನನ್ನೇ ಕೀಳಾಗಿ ಕಾಣುತ್ತಾ, ತನ್ನನ್ನೇ ದ್ವೇಷಿಸುವ ಸ್ಥಿತಿಗೆ ಇಳಿದರೆ ಅದೇ ಅವನತಿಯ ಹೆಬ್ಬಾ ಗಿಲು. ಆಗ ಜನಾಂಗ ಎಲ್ಲ ರೀತಿಯಲ್ಲೂ ದುರ್ಬಲವಾಗುತ್ತದೆ. ಇದೇ ನೈತಿಕ ಅಧಃಪತನಕ್ಕೆ ಕಾರಣ. ಇದೇ ಎಲ್ಲ ರೀತಿಯ ಸೃಜನಾ ತ್ಮಕತೆಯ ಕೊರತೆಗೂ ಕಾರಣ. ಇದನ್ನು ಮನಗಂಡ ವಿವೇಕಾ ನಂದರು ದೇಶಬಾಂಧವರಲ್ಲಿ ಸ್ವಾಭಿಮಾನದ ಕಿಚ್ಚನ್ನು ಕೆರಳಿಸಿ ದರು, ಆತ್ಮವಿಶ್ವಾಸದ ಬೀಜವನ್ನು ಬಿತ್ತಿದರು, ಹಿಂದಿನ ವೈಭವದ ಪರಿಚಯವನ್ನು ಮಾಡಿಕೊಟ್ಟರು, ಮೃತಪ್ರಾಯ ಜನಾಂಗಕ್ಕೆ ಹೊಸ ಜೀವವನ್ನು ತುಂಬಿದರು. ಜನರಲ್ಲಿ ರಾಷ್ಟ್ರಭಕ್ತಿಯನ್ನು ಜಾಗೃತಗೊಳಿಸಿದರು. ಎಲ್ಲ ರೀತಿಯ ಪ್ರಾದೇಶಿಕ, ಮತೀಯ, ಭಾಷೀಯ ಮಿತಿಗಳನ್ನೂ ಮೀರಿ ಜನರು ಒಂದು ಸಮಗ್ರ ರಾಷ್ಟ್ರವಾಗಿ ಮೇಲೇಳಲು ಸ್ವಾಮಿ ವಿವೇಕಾನಂದರು ಮಾಡಿದ ಪ್ರಯತ್ನ ಅಸದೃಶವಾದುದು. ಅವರ ಈ ಪ್ರಯತ್ನ ಮುಂದಿನ ಸ್ವಾತಂತ್ರ್ಯ ಚಳುವಳಿಗೆ ಭದ್ರ ಬುನಾದಿಯಾಯಿತು. ಸ್ವಾತಂತ್ರ್ಯ ಹೋರಾಟಗಾರರೆಲ್ಲರ ಧಮನಿಯಲ್ಲಿಯೂ ವಿವೇಕಾನಂದರ ಸ್ಫೂರ್ತಿಯ ಬಿಸಿನೆತ್ತರು ಹರಿಯುತ್ತಿದ್ದುದನ್ನು ಕಾಣಬಹುದು. ''ಇನ್ನು ಐವತ್ತು ವರ್ಷಗಳಲ್ಲಿ ಭಾರತ ಸ್ವತಂತ್ರವಾಗುತ್ತದೆ'' ಎಂಬ ಅವರ ಭವಿಷ್ಯವಾಣಿ ಸತ್ಯವಾಯಿತು.

ಅವರ ಭವಿಷ್ಯ ಭಾರತದ ಕಲ್ಪನೆ ರಾಜಕೀಯ ಸ್ವಾತಂತ್ರ್ಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅವರು ಕಂಡ ಭವಿಷ್ಯ ಭಾರತದ ಕಲ್ಪನೆ ಎಂತಹ ಸ್ವರೂಪದ್ದಾಗಿತ್ತು?

ಮೊದಲನೆಯದಾಗಿ ಸ್ವಾಮಿ ವಿವೇಕಾನಂದರು ಸಮಾನತೆ ಯನ್ನು ಬಯಸಿದ್ದರು. ಎಲ್ಲರೂ ಎಲ್ಲ ವಿಷಯದಲ್ಲಿಯೂ ಸಮಾನರಲ್ಲ ಎಂಬುದು ಅವರಿಗೆ ಗೊತ್ತಿತ್ತು. ಅವಳಿ ಮಕ್ಕಳ ಲ್ಲಿಯೂ ಕೂಡ ನಾವು ಪೂರ್ಣ ಸಮಾನತೆಯನ್ನು ಕಾಣುವುದಿಲ್ಲ. ಇಂತಹ ಸಮಾನತೆ ಸ್ವಾಗತಾರ್ಹವೂ ಅಲ್ಲ. ವೈವಿಧ್ಯತೆಯೇ ಸೃಷ್ಟಿಯ ನಿಯಮ ಎಂದು ಅವರು ಸಾರಿದರು. ಪೂರ್ಣ ಸಮಾ ನತೆಯೆಂದರೆ ಅದು ಪ್ರಳಯಾವಸ್ಥೆ. ಜೀವವೈವಿಧ್ಯವನ್ನು (Biodiversity) ಬಯಸುವಂತೆ ಸಾಂಸ್ಕೃತಿಕ ವೈವಿಧ್ಯವನ್ನೂ ಧರ್ಮವೈವಿಧ್ಯವನ್ನೂ ನಾವು ಬಯಸಬೇಕು. ಧ್ವನಿವೈವಿಧ್ಯವೇ ಸಂಗೀತ, ವರ್ಣವೈವಿಧ್ಯವೇ ಕಲೆ ಮತ್ತು ಶಬ್ದವೈವಿಧ್ಯವೇ ಸಾಹಿತ್ಯ. ಆದರೆ ಈ ಎಲ್ಲ ವೈವಿಧ್ಯಗಳ ಹಿಂದೆ ಒಂದು ಏಕತೆಯ ಸೂತ್ರವೂ ಇರಬೇಕು. ಸಮಾಜದಲ್ಲಿ ಆಳುಗಳೂ ಇರಬೇಕು, ಆಳುವವರೂ ಇರಬೇಕು. ಆದರೆ ಮೇಲು-ಕೀಳು ಭೇದವಿರ ಬಾರದು ಮತ್ತು ಎಲ್ಲರಿಗೂ ಸಮಾನ ಅವಕಾಶಗಳಿರಬೇಕು. ಅರ್ಥ, ವಿದ್ಯೆ, ಸಂಸ್ಕೃತಿ, ಧರ್ಮ ಮುಂತಾದ ವಿಷಯಗಳಲ್ಲಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಬೇಕು. ಇವುಗಳು ಸಮಾಜದ ಯಾವುದೇ ವರ್ಗದ ವಿಶೇಷ ಸ್ವತ್ತು ಆಗಬಾರದು. ಸ್ವಾಮಿ ವಿವೇಕಾನಂದರು ವಿಶೇಷ ಹಕ್ಕುಬಾಧ್ಯತೆಯನ್ನು (Privi lege) ಖಂಡಿಸುತ್ತ ಹೇಳುತ್ತಾರೆ, ''ಮೊದಲು ಹಕ್ಕುಬಾಧ್ಯತೆಯ ಮೃಗೀಯ ಸ್ವರೂಪ ಇದೆ. ಅದೇ ಬಲಾಢ್ಯನಿಗೆ ಬಲಹೀನನ ಮೇಲೆ ಇರುವ ಹಕ್ಕುಬಾಧ್ಯತೆ. ಅನಂತರ ಐಶ್ವರ್ಯದ ಹಕ್ಕು ಗಳಿವೆ. ಒಬ್ಬನಿಗೆ ಮತ್ತೊಬ್ಬನಿಗಿಂತ ಹೆಚ್ಚು ಐಶ್ವರ್ಯಗಳಿದ್ದರೆ ಅವ ನಿಗೆ ಹೆಚ್ಚು ಹಕ್ಕುಗಳು ಬೇಕು. ಇದಕ್ಕಿಂತಲೂ ಸೂಕ್ಷ್ಮವಾದ, ಆದರೆ ಇದಕ್ಕಿಂತಲೂ ಪ್ರಬಲವಾದ ಬುದ್ಧಿಯ ಹಕ್ಕಿದೆ. ಒಬ್ಬನಿಗೆ ಎಲ್ಲರಿಗಿಂತ ಹೆಚ್ಚು ಗೊತ್ತಿದೆ ಎಂದು ಹೆಚ್ಚು ಹಕ್ಕುಗಳನ್ನು ಆಶಿಸು ತ್ತಾನೆ. ಕೊನೆಯದೇ, ಅತಿ ದುಷ್ಟವಾದುದೇ, ಆಧ್ಯಾತ್ಮಿಕತೆಯ ಹಕ್ಕು, ಕೆಲವರಿಗೆ ದೇವರು ಧರ್ಮದ ವಿಷಯ ಹೆಚ್ಚು ಗೊತ್ತಿದೆ ಎಂದು ಎಲ್ಲರಿಗಿಂತ ಹೆಚ್ಚು ಹಕ್ಕುಗಳನ್ನು ಕೇಳುತ್ತಾರೆ. 'ಕುರಿಮಂದೆ ಯಂತೆ ಇರುವ ಜನರೇ, ಬಂದು ನನ್ನನ್ನು ಪೂಜಿಸಿ, ನಾವು ದೇವದೂತರು, ನೀವು ನನ್ನನ್ನು ಪೂಜಿಸಬೇಕು' ಎನ್ನುತ್ತಾರೆ... ಯಾರಿಗೂ ಯಾವ ವಿಧವಾದ ಹಕ್ಕುಗಳೂ ಇಲ್ಲ. ಒಂದೇ ಶಕ್ತಿ ಎಲ್ಲರಲ್ಲಿಯೂ ಇದೆ. ಅದನ್ನು ಒಬ್ಬ ಹೆಚ್ಚು ವ್ಯಕ್ತಗೊಳಿಸಿರು ವನು, ಮತ್ತೊಬ್ಬ ಅದನ್ನು ಕಡಿಮೆ ವ್ಯಕ್ತಗೊಳಿಸುವನು. ವಿಶೇಷ ಹಕ್ಕಿಗೆ ಇಲ್ಲಿ ಅವಕಾಶವೆಲ್ಲಿದೆ?'' *(ಸ್ವಾಮಿ ವಿವೇಕಾನಂದರ ಕೃತಿ ಶ್ರೇಣಿ, ಸಂ.೬, ಪು.೩೪೧)*

ವಿವೇಕಾನಂದರ ಪ್ರಕಾರ ಸಮಾಜದಲ್ಲಿ ವಿವಿಧ ವರ್ಗಗಳು ಇರುವುದು ಸ್ವಾಭಾವಿಕ. ಆದರೆ ಮೇಲು ಕೀಳು ಭಾವನೆಯನ್ನು

ಹುಟ್ಟುಹಾಕುವ, ಕೆಳವರ್ಗದವರನ್ನು ಧರ್ಮ, ಸಂಸ್ಕೃತಿ, ವಿದ್ಯೆಗಳಿಂದ ಹೊರಗಿರಿಸುವ, ಹಕ್ಕುಬಾಧ್ಯತೆಗಳಿಗೆ ಕಾರಣವಾಗುವ ಆನುವಂಶಿಕವಾದ ಅಸ್ಪೃಶ್ಯತೆಯನ್ನು ಅವರು ಕಟುವಾಗಿ ಖಂಡಿಸುತ್ತಾರೆ. ''ನಮ್ಮ ಧರ್ಮ ಅಡುಗೆಮನೆಯನ್ನು ಸೇರುವ ಅಪಾಯವಿದೆ. ಮುಕ್ಕಾಲು ಪಾಲು ಜನರು ಈಗ ವೇದಾಂತಿಗಳೂ ಅಲ್ಲ, ಪೌರಾಣಿಕರೂ ಅಲ್ಲ, ಶಾಕ್ತರೂ ಅಲ್ಲ. ನಾವು 'ಮುಟ್ಟಬೇಡಿಗಳು.' ನಮ್ಮ ಧರ್ಮ ಅಡುಗೆಮನೆಯಲ್ಲಿದೆ. ಅಡುಗೆ ಮಾಡುವ ಪಾತ್ರೆಯೇ ನಮ್ಮ ದೇವರು. 'ನಾನು ಮಡಿ, ನನ್ನನ್ನು ಮುಟ್ಟಬೇಡಿ' – ಇದೇ ನಮ್ಮ ಧರ್ಮವಾಗಿದೆ. ಹೀಗೆ ಮತ್ತೊಂದು ಶತಮಾನ ಕಳೆದರೆ ನಾವೆಲ್ಲ ಹುಚ್ಚರ ಆಸ್ಪತ್ರೆಯನ್ನು ಸೇರಬೇಕಾಗುತ್ತದೆ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೩.ಪು. ೫೫)* ಸಾವಿರಾರು ವರ್ಷಗಳಿಂದ ಸುಮಾರು ಕಾಲುಭಾಗದಷ್ಟು ಜನರನ್ನು ಸಮಾಜ, ಸಂಸ್ಕೃತಿ, ಧರ್ಮಗಳಿಂದ ಹೊರಗಿರಿಸಿದೆವು. ಅವರು ಸಮೀಪ ಬಂದರೂ ಅಶುಚಿ ಎಂದು ಅವರನ್ನು ದೂರವಿರಿಸಿದೆವು. ಮತ್ತೆ ಬಹುಮಂದಿ ಜನರನ್ನು ಶೂದ್ರರೆಂದು ಪರಿಗಣಿಸಿ, ಅವರಿಂದ ಎಲ್ಲ ಕೆಲಸಗಳನ್ನು ಮಾಡಿಸಿಕೊಂಡು ವೈದಿಕ ಸಂಸ್ಕೃತಿಯಿಂದ ಅವರನ್ನು ಹೊರಗಿರಿಸಿದೆವು. ಅಸ್ಪೃಶ್ಯತೆ ಮತ್ತು ಶೂದ್ರದಮನ ಇವೆರಡು ನಾವೆಸಗಿದ ರಾಷ್ಟ್ರೀಯ ಮಹಾಪರಾಧಗಳು. ವಿವೇಕಾನಂದರು ತಮ್ಮದೇ ಆದ ರೀತಿಯಲ್ಲಿ ಒಂದು ಆದರ್ಶ ಸಮಾಜದ ಕಲ್ಪನೆಯನ್ನು ನೀಡುತ್ತಾರೆ. ನಾಲ್ಕು ವರ್ಣಗಳು ಹೇಗೆ ಒಂದಾದ ಮೇಲೊಂದರಂತೆ ಸಮಾಜವನ್ನು ಆಳುತ್ತವೆ ಎಂಬುದನ್ನು ವಿವರಿಸುತ್ತ ಅವರು ಹೇಳುತ್ತಾರೆ: ''ಬ್ರಾಹ್ಮಣ ಯುಗದ ಜ್ಞಾನವನ್ನು, ಕ್ಷತ್ರಿಯ ಯುಗದ ಸಂಸ್ಕೃತಿಯನ್ನು, ವೈಶ್ಯಯುಗದ ವಿತರಣಾ ವ್ಯವಸ್ಥೆಯನ್ನು, ಕೊನೆಯ ವರ್ಗದ ಸಮಾನತೆಯ ಆದರ್ಶವನ್ನು, ಇವುಗಳೆಲ್ಲದರ ದೋಷಗಳನ್ನು ಕಳೆದು, ಒಗ್ಗೂಡಿಸಲು ಸಾಧ್ಯವಾದರೆ ಅದು ಆದರ್ಶ ಸಮಾಜವಾಗಬಲ್ಲದು.'' ಅವರೇ ಮುಂದುವರಿದು, ''ಇದು ಸಾಧ್ಯವೆ?'' ಎಂದು ಸಂದೇಹಿಸುತ್ತಾರೆ. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೪, ಪು.೪೬೬)* ಅವರ ದೃಷ್ಟಿಯಲ್ಲಿ ಯಾವ ಸಮಾಜವೂ ಪರಿಪೂರ್ಣವಲ್ಲ. ಈ ಪ್ರಪಂಚದಲ್ಲಿ ಎಲ್ಲವೂ ಒಳಿತು ಕೆಡಕುಗಳ ಮಿಶ್ರಣ. ಮಾನವನ ಆತ್ಯಂತಿಕ ಆದರ್ಶ, ವಿವೇಕಾನಂದರ ದೃಷ್ಟಿಯಲ್ಲಿ, ಸಮಾಜವನ್ನು ಮೀರಿ ಹೋಗುವುದು. ಪ್ರತಿಯೊಬ್ಬನೂ ತನ್ನ ಆಂತರಿಕ ದಿವ್ಯತೆಯನ್ನು ವ್ಯಕ್ತಪಡಿಸಿ ಹಂತಹಂತವಾಗಿ ಸಮಾಜವನ್ನು ಮೀರಿ ಹೋಗಲು ಅವಕಾಶವಿರುವ ಸಮಾಜವೇ ಆದರ್ಶ ಸಮಾಜ. ಭವಿಷ್ಯ ಭಾರತದಲ್ಲಿ ಇಂತಹ ಆದರ್ಶ ಸಮಾಜವೊಂದರ ನಿರ್ಮಾಣವಾಗಬೇಕೆಂಬುದು ಸ್ವಾಮಿ ವಿವೇಕಾನಂದರ ಕನಸಾಗಿತ್ತು.

ಎರಡನೆಯದಾಗಿ ವಿವೇಕಾನಂದರು ಬಡತನರಹಿತ ಸಮಾಜವನ್ನು ಬಯಸಿದ್ದರು. ತಮ್ಮ ಭಾರತ ಪರಿಭ್ರಮಣ ಸಮಯದಲ್ಲಿ ಅವರು ಬಡತನದ ಕರಾಳ ರೂಪವನ್ನು ಕಂಡಿದ್ದರು. ಈ ರೀತಿ ಹೀನಾಯ ಬಡತನಕ್ಕೆ ಕಾರಣವನ್ನು ಅವರು ಕಂಡಿದ್ದರು. ಅವರ ದೃಷ್ಟಿಯಲ್ಲಿ ಮೊದಲನೆಯ ಕಾರಣ, ಐರೋಪ್ಯರು ನಮ್ಮ ದೇಶದ ಸಂಪತ್ತನ್ನು ದೋಚಿಕೊಂಡು ಹೋದದ್ದು. ಐರೋಪ್ಯರು ಭಾರತಕ್ಕೆ ಕಾಲಿಡುವ ಮೊದಲು ಅವರೇ ನೋಡಿ ಆಶ್ಚರ್ಯಪಡುವಷ್ಟು ಸಂಪದ್ಭರಿತವಾಗಿತ್ತು ಭಾರತ. ಭಾರತದ ಐಶ್ವರ್ಯದಿಂದಲೇ ಐರೋಪ್ಯರ ನವನಾಗರಿಕತೆ ನಿರ್ಮಾಣವಾಯಿತೆಂದು ವಿವೇಕಾನಂದರು ಅಭಿಪ್ರಾಯಪಡುತ್ತಾರೆ: ''ಭಾರತದ ವ್ಯಾಪಾರ ಮತ್ತು ಭಾರತದ ವರಮಾನವೆಲ್ಲ ಈಗ ಆಂಗ್ಲರ ವಶದಲ್ಲಿದೆ. ಅದಕ್ಕೇ ಅವರು ಎಲ್ಲ ರಾಷ್ಟ್ರಗಳಿಗಿಂತ ಮೇಲಿರುವುದು... ಇದನ್ನು ಐರೋಪ್ಯರು ಒಪ್ಪಿಕೊಳ್ಳುವುದಿಲ್ಲ. ಅವರ ಐಶ್ವರ್ಯ, ನಾಗರಿಕತೆಗಳಿಗೆ ಭಾರತ ಮತ್ತು ಇಲ್ಲಿನ ಸ್ಥಳೀಯ ಜನ ಕಾರಣರೆಂಬ ಸತ್ಯವನ್ನು ಅವರು ಒಪ್ಪಿಕೊಳ್ಳಲು ಅಥವಾ ತಿಳಿದುಕೊಳ್ಳಲು ಇಚ್ಛಿಸುವುದಿಲ್ಲ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೧, ಪು.೪೦೬)*

ವಿವೇಕಾನಂದರ ಪ್ರಕಾರ ಭಾರತದ ಬಡತನಕ್ಕೆ ಎರಡನೆಯ ಕಾರಣ ಮೇಲ್ಜಾತಿಯವರಿಂದಾದ ಶೋಷಣೆ. ಅವರ ನೊಂದ ಹೃದಯದ ನುಡಿಗಳಿವು: ''ಭರತಖಂಡದಲ್ಲಿ ಕೋಟ್ಯಂತರ ಜನರು ಮೊಹುವಾ ಹೂವನ್ನು ತಿಂದು ಜೀವಿಸುತ್ತಿರುವಾಗ, ಸುಮಾರು ಹತ್ತು ಇಪ್ಪತ್ತು ಲಕ್ಷ ಸಾಧುಸಂತರು ಮತ್ತು ಅನೇಕ ಕೋಟಿ ಬ್ರಾಹ್ಮಣರು ಬಡವರ ರಕ್ತವನ್ನು ಹೀರುತ್ತಿರುವರು. ಅವರನ್ನು ಮೇಲೆತ್ತುವುದಕ್ಕೆ ಸ್ವಲ್ಪವೂ ಶ್ರಮಪಡುವುದಿಲ್ಲ. ಇದು ಒಂದು ದೇಶವೋ ಅಥವಾ ನರಕದ ಬೀಡೊ? ಇಲ್ಲಿರುವುದು ಧರ್ಮವೋ ಅಥವಾ ಪಿಶಾಚಿಯ ನೃತ್ಯವೊ?'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೪, ಪು.೧೨೧)* ನಿಮ್ನ ವರ್ಗದವರ ಬಗ್ಗೆ ಅವರಿಗಿದ್ದ ಕಳಕಳಿ ಅನನ್ಯವಾದುದ್ದು. ಅವರ ಹೃದಯದ ಮಿಡಿತವನ್ನು ಕೇಳಿ: ''ನಮ್ಮ ಪೂರ್ವಿಕರು ಕೆಲವು ಶಾಸ್ತ್ರ ಪುರಾಣ ಬರೆದು ಹಲವು ಗುಡಿಗಳನ್ನು ಕಟ್ಟಿದರು ಅಷ್ಟೇ (ನಿಜವಾಗಿ ಕಟ್ಟಿದವರು ಕೆಳವರ್ಗದವರು). ಅಷ್ಟಕ್ಕೇ ನೀವು ಮಾಡುವ ಜಯಧ್ವನಿ ಆಕಾಶವನ್ನೇ ಮುಟ್ಟುತ್ತದೆ. ಆದರೆ ಪ್ರಪಂಚದ ಅಭಿವೃದ್ಧಿಗೆಲ್ಲ ಯಾರ ಹೃದಯದ ರಕ್ತ ವ್ಯಯವಾಯಿತೋ, ಅವರನ್ನು ಯಾರು ಹೊಗಳುವರು? ಲೋಕವಿಜೇತರಾದ ಧರ್ಮವೀರರು, ರಣವೀರರು, ಕಾವವೀರರನ್ನು ಪ್ರಪಂಚದಲ್ಲಿ ಎಲ್ಲರೂ ಹೊಗಳುವವರೇ, ಪೂಜಿಸುವವರೇ. ಆದರೆ ಹಿಂದುಳಿದ ಕೂಲಿಕಾರರನ್ನು ಯಾರೂ ಲಕ್ಷಿಸುವುದಿಲ್ಲ, ಅವರಿಗೆ ಯಾರೂ ಸಹಾನುಭೂತಿ ತೋರುವುದಿಲ್ಲ. ಎಲ್ಲರೂ ಅವರನ್ನು ದ್ವೇಷಿಸುವವರೇ. ಇಂತಹ ವಾತಾವರಣದಲ್ಲಿ ಬಾಳುತ್ತ, ಅಸಾಧ್ಯ ಸಹಿಷ್ಣುತೆ, ಪರಮ ಪ್ರೇಮ, ಕರ್ಮನಿಷ್ಠೆಯನ್ನು ವ್ಯಕ್ತಪಡಿಸುತ್ತ ತಮ್ಮ ಮನೆಯಲ್ಲಿ ಗೊಣಗಾಡದೆ ಅವರು ಕೆಲಸವನ್ನು ಮಾಡುತ್ತಿರುವರು. ಇಲ್ಲಿ ವೀರತ್ವವಿಲ್ಲವೆ?'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೧, ಪು.೪೦೭)*

ಇಂತಹ ಕಡುಬಡತನ ನಿವಾರಣೆಯಾಗಬೇಕೆಂಬುದು ವಿವೇಕಾನಂದರ ಮನದಾಳದ ಆಸೆಯಾಗಿತ್ತು. ಜನಸಾಮಾನ್ಯರೂ ಭೌತಿಕ ಸುಖವನ್ನು ಅನುಭವಿಸಲಿ ಎಂದು ಅವರು ಬಯಸಿದರು.

ಪಾಶ್ಚಾತ್ಯರ ವಿಜ್ಞಾನ ಮತ್ತು ತಾಂತ್ರಿಕತೆಯನ್ನು ಕಲಿತು, ನಮ್ಮ ಸಂಸ್ಕೃತಿಯನ್ನು ಬಲಿಗೊಡದೆ, ಬಡಜನರಿಗೆ ಹೆಚ್ಚು ಉದ್ಯೋಗವನ್ನು ಒದಗಿಸಿಕೊಡಬೇಕು. ಅವರ ದುಡಿಮೆಯ ಪಾಲು ಅವರಿಗೇ ದೊರೆಯುವಂತಾಗಬೇಕು, ಮಧ್ಯವರ್ತಿಗಳು ಅದನ್ನು ಕಬಳಿಸುವಂತಾಗಬಾರದು. ಅವರು ತಮ್ಮ ಕಾಲಮೇಲೆ ತಾವು ನಿಂತು, ಆತ್ಮವಿಶ್ವಾಸದಿಂದಲೂ ಆತ್ಮಗೌರವದಿಂದಲೂ ಘನತೆಯ ಜೀವನವನ್ನು ಬಾಳುವಂತಾಗಬೇಕು. ಇಂತಹ ಭವಿಷ್ಯ ಭಾರತದ ಕಲ್ಪನೆ ಅವರದಾಗಿತ್ತು.

ಮೂರನೆಯದಾಗಿ, ಜನಸಾಮಾನ್ಯರೆಲ್ಲರಿಗೂ ಶಿಕ್ಷಣವು ತಲುಪಬೇಕೆಂದು ವಿವೇಕಾನಂದರು ಬಯಸಿದ್ದರು. ಅವರ ಪ್ರಕಾರ ಪಶ್ಚಿಮ ದೇಶಗಳು ಅಭಿವೃದ್ಧಿ ಹೊಂದುವುದಕ್ಕೆ ಕಾರಣ ಅಲ್ಲಿ ಜನಸಾಮಾನ್ಯರೆಲ್ಲರಲ್ಲಿಯೂ ಶಿಕ್ಷಣವು ವ್ಯಾಪಕವಾಗಿ ಹರಡಿರುವುದೇ ಆಗಿದೆ. ಅವರ ದೃಷ್ಟಿಯಲ್ಲಿ ಕೇವಲ ವಿಷಯ ಸಂಗ್ರಹ ಶಿಕ್ಷಣವಲ್ಲ. ಬುದ್ಧಿ ಮತ್ತು ಭಾವ ಎರಡಕ್ಕೂ ಪುಷ್ಟಿಯನ್ನು ನೀಡುವ, ವ್ಯಕ್ತಿಯನ್ನು ಚಾರಿತ್ರ್ಯವಂತನನ್ನಾಗಿ ಮಾಡುವ, ಚಿಂತನಾಸ್ವಾತಂತ್ರ್ಯವನ್ನು ನೀಡುವ, ಪರಾವಲಂಬನೆಯನ್ನು ಹೋಗಲಾಡಿಸುವ, ಆತ್ಮವಿಶ್ವಾಸವನ್ನು ನೀಡುವ, ದೇಶಾಭಿಮಾನವನ್ನು ಹೆಚ್ಚಿಸುವ, ಭಾರತೀಯ ಸಂಸ್ಕೃತಿಯಲ್ಲಿ ಗೌರವವನ್ನು ಅಧಿಕಗೊಳಿಸುವ ಮತ್ತು ಧರ್ಮ ಹಾಗೂ ಆಧ್ಯಾತ್ಮಿಕ ಶ್ರದ್ಧೆಯನ್ನು ವೃದ್ಧಿಸುವ ಆದರ್ಶ ಶಿಕ್ಷಣವನ್ನು ಅವರು ಬಯಸಿದ್ದರು. ಶಿಕ್ಷಣವೆಂದರೆ ಪಾಶ್ಚಾತ್ಯ ನಡೆನುಡಿಗಳನ್ನು ಅನುಕರಿಸುವುದಲ್ಲ. ಇತರರಿಂದ ಕಲಿಯಬೇಕು, ಅದನ್ನು ನಮ್ಮದಾಗಿಸಿಕೊಳ್ಳಬೇಕು. ನಾವು ಇತರರಾಗಬಾರದು ಇದು ವಿವೇಕಾನಂದರ ಅಭಿಪ್ರಾಯ. ಅವರು ಹೇಳುತ್ತಾರೆ: ''ನಮ್ಮ ದೇಶೀಯ ಉಡುಪು, ಆಹಾರ ಮತ್ತು ಜೀವನದ ಕ್ರಮವನ್ನು ಬಿಡುವುದರಿಂದ ನಾವು ನಮ್ಮ ರಾಷ್ಟ್ರೀಯತೆಯನ್ನು ಕಳೆದುಕೊಳ್ಳುತ್ತೇವೆ. ನಾವು ಎಲ್ಲರಿಂದಲೂ ಕಲಿತುಕೊಳ್ಳಬಹುದು. ಆದರೆ ಯಾವುದನ್ನು ಕಲಿಯುವುದರಿಂದ ನಮ್ಮ ರಾಷ್ಟ್ರದ ವೈಶಿಷ್ಟ್ಯತೆಯನ್ನು ಕಳೆದುಕೊಳ್ಳುತ್ತೇವೆಯೋ ಅಂತಹದರಿಂದ ನಮ್ಮ ಏಳಿಗೆಗೇನೂ ಸಹಾಯವಾಗುವುದಿಲ್ಲ: ಅಷ್ಟೇ ಅಲ್ಲ, ನಾವು ಅಧೋಗತಿಗಿಳಿಯುತ್ತೇವೆ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೮, ಪು.೨೪೫)* ಅನುಕರಣೆ ದಾಸ್ಯ ಮನೋಭಾವವನ್ನು ಉಂಟುಮಾಡುತ್ತದೆ. ವಿದ್ಯೆ, ಕಲೆ, ಸಾಹಿತ್ಯ, ಸಂಗೀತ, ಧರ್ಮ, ಮುಂತಾದ ಎಲ್ಲ ವಿಷಯದಲ್ಲಿಯೂ ಪಾಶ್ಚಾತ್ಯರ ಕಡೆ ತಿರುಗುವುದರಿಂದ ನಮ್ಮತನವನ್ನು ನಾವು ಕಳೆದುಕೊಳ್ಳುತ್ತೇವೆ, ನಾವು ಭಿಕ್ಷುಕರಂತಾಗುತ್ತೇವೆ. ವಿವೇಕಾನಂದರು ಹೇಳುತ್ತಾರೆ. ''ಭಿಕ್ಷುಕನ ಬೇಡಿಕೆಗಳೊಂದೂ ಈಡೇರುವುದಿಲ್ಲ. ಸರ್ಕಾರ ನಿಮಗೆ ಬೇಕಾದುದನ್ನೆಲ್ಲ ಕೊಡುವುದೆಂದು ಇಟ್ಟುಕೊಳ್ಳೋಣ. ಜರೂರಾದ ಕೆಲಸಗಳನ್ನು ನೋಡಿಕೊಳ್ಳುವವರಾರು? ಆದ್ದರಿಂದ ಮನುಷ್ಯರನ್ನು ಮೊದಲು ನಿರ್ಮಾಣ ಮಾಡಿ. ಪೌರುಷವಂತರಾದ ಮನುಷ್ಯರು ನಮಗೀಗ ಬೇಕಾಗಿರುವುದು. ಶ್ರದ್ಧೆಯಿಲ್ಲದಿದ್ದಲ್ಲಿ ಅಂತಹ ಮನುಷ್ಯರನ್ನು ತಯಾರು ಮಾಡಲು ಹೇಗೆ ಸಾಧ್ಯ?'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೮, ಪು.೩೦೧)* ಕೇವಲ ರಾಜಕೀಯ ದಾಸ್ಯದಿಂದಲ್ಲ, ಸಾಂಸ್ಕೃತಿಕ ದಾಸ್ಯದಿಂದಲೂ ಭಾರತ ಮುಕ್ತವಾಗಿರಬೇಕೆಂಬುದು ಸ್ವಾಮಿ ವಿವೇಕಾನಂದರ ಆಶಯವಾಗಿತ್ತು.

ನಾಲ್ಕನೆಯದಾಗಿ, ಭಾರತವು ಎಂದಿಗೂ ತನ್ನ ಧರ್ಮ ಮತ್ತು ಆಧ್ಯಾತ್ಮಿಕತೆಯನ್ನು ಬಿಟ್ಟುಕೊಡಬಾರದು ಎಂದು ಸ್ವಾಮೀಜಿ ಬಯಸಿದ್ದರು. ಅವರ ಪ್ರಕಾರ ಧರ್ಮವೇ ಭಾರತದ ಬೆನ್ನೆಲುಬು. ಇಲ್ಲಿಯ ಸಾಮಾಜಿಕ ವ್ಯವಸ್ಥೆ, ಸಂಸ್ಕೃತಿ ಎಲ್ಲವೂ ಧರ್ಮಮೂಲವಾಗಿವೆ. ಈ ಧರ್ಮವನ್ನು ಕಳೆದುಕೊಂಡರೆ ಭೌಗೋಳಿಕವಾದ ಭಾರತ ಉಳಿಯುತ್ತದೆಯೇ ಹೊರತು ನಿಜವಾದ ಭಾರತ ಉಳಿಯುವುದಿಲ್ಲ. ಪುರಾತನ ಈಜಿಪ್ಟ್, ಬ್ಯಾಬಿಲೋನಿಯಾ, ಗ್ರೀಕ್, ರೋಮ್, ಪರ್ಷಿಯಾ ಮುಂತಾದ ರಾಷ್ಟ್ರಗಳು ನಾಶವಾಗಿರುವಂತೆ ಭಾರತವೂ ನಾಶವಾಗುತ್ತದೆ. ಅವರು ಹೇಳುತ್ತಾರೆ, ''ಭರತಖಂಡದಲ್ಲಿ ಎಲ್ಲ ವಿಧದ ಜಾಗೃತಿ ಫಲಕಾರಿಯಾಗಬೇಕಾದರೆ ಮೊದಲು ಧಾರ್ಮಿಕ ಜಾಗೃತಿ ಆವಶ್ಯಕ. ರಾಜಕೀಯ ಮತ್ತು ಸಾಮಾಜಿಕ ವಿಷಯಗಳಿಂದ ಭರತಖಂಡವನ್ನು ತುಂಬುವುದಕ್ಕೆ ಮುಂಚೆ ಆಧ್ಯಾತ್ಮಿಕ ಭಾವನೆಗಳ ಮಳೆಗರೆಯಿರಿ. ಮೊದಲು ನಾವು ಲಕ್ಷ್ಯದಲ್ಲಿಡಬೇಕಾದುದು ಇದು. ನಮ್ಮ ಉಪನಿಷತ್ತು, ಶಾಸ್ತ್ರ, ಪುರಾಣಗಳಲ್ಲಿರುವ ಅದ್ಭುತ ಸತ್ಯಗಳು ಪ್ರಚಾರವಾಗಬೇಕು. ಮಠಗಳಿಂದ, ಕಾನನಗಳಿಂದ, ತಮಗೆ ಇವು ಮೀಸಲಾಗಿವೆ ಎಂದು ಭಾವಿಸಿದ ಕೆಲವು ಜನರಿಂದ ಹೊರಗೆ ತಂದು ಎಲ್ಲರಿಗೂ ಪ್ರಚಾರ ಮಾಡಬೇಕು. ಈ ಭಾವನೆ ಬೆಂಕಿಯಂತೆ ಉತ್ತರದಿಂದ ದಕ್ಷಿಣಕ್ಕೆ, ಪೂರ್ವದಿಂದ ಪಶ್ಚಿಮಕ್ಕೆ, ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ, ಸಿಂಧುವಿನಿಂದ ಬ್ರಹ್ಮಪುತ್ರದವರೆಗೆ ಹರಿಯಬೇಕು. ಪ್ರತಿಯೊಬ್ಬರೂ ಇದನ್ನು ತಿಳಿದುಕೊಳ್ಳಬೇಕು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೩, ಪು.೧೧೧)*

ಕೊನೆಯದಾಗಿ, ನೈತಿಕತೆಯ ತಳಹದಿಯ ಮೇಲೆಯೇ ಎಲ್ಲ ಸೇವಾಕಾರ್ಯಗಳೂ ನಡೆಯಬೇಕೆಂಬುದೂ ವಿವೇಕಾನಂದರ ಆಶಯವಾಗಿತ್ತು. ಭಾರತವು ಹಿಂದಿನಿಂದಲೂ ನೈತಿಕತೆಗೆ ಹೆಚ್ಚು ಪ್ರಾಧಾನ್ಯವನ್ನು ನೀಡಿರುವುದು. ಎಲ್ಲ ಆಚರಣೆಗಳೂ ನೀತಿಬದ್ಧವಾಗಿರಬೇಕು. ಜನರು ಭೌತಿಕವಾಗಿಯೂ, ಮಾನಸಿಕವಾಗಿಯೂ ದುರ್ಬಲರಾದರೆ ಅನೈತಿಕ ತಲೆದೋರುತ್ತದೆ. ದಕ್ಷ ಆಡಳಿತದ ಬಲದಿಂದ ಅನೈತಿಕತೆಯನ್ನು ಸ್ವಲ್ಪಮಟ್ಟಿಗೆ ತಡೆಯಬಹುದಾದರೂ, ಆಡಳಿತ ದುರ್ಬಲವಾದಾಗ ಅನೈತಿಕತೆ ಮತ್ತೆ ತಾಂಡವವಾಡುತ್ತದೆ. ಆದ್ದರಿಂದ ಜನರ ಮನಃಸ್ಥಿತಿಯೇ ಬದಲಾಗಿ ನೈತಿಕತೆ ಅವರ ಸ್ವಭಾವವಾಗಬೇಕು. ಆಗ ಎಂತಹ ಸ್ಥಿತಿಯಲ್ಲಿಯೂ ಅವರು ನೀತಿವಂತರಾಗಿ ಬಾಳುತ್ತಾರೆ. ಇದೇ ಕಾರಣದಿಂದಾಗಿಯೇ ವಿವೇಕಾನಂದರು ಚಾರಿತ್ರ್ಯ ನಿರ್ಮಾಣಕ್ಕೆ ಹೆಚ್ಚು ಒತ್ತನ್ನು ನೀಡಿದರು. ''ಎಲ್ಲ ಮನೆಗಳನ್ನು ದಾನಗೃಹ

ವನ್ನಾಗಿ ನೀವು ಪರಿವರ್ತಿಸಬಹುದು, ಎಲ್ಲೆಲ್ಲಿಯೂ ನೀವು ಔಷಧಾಲಯವನ್ನು ತೆರೆಯಬಹುದು. ಆದರೆ ಮಾನವನ ಚಾರಿತ್ರ್ಯ ಬದಲಾಗದಿದ್ದರೆ ಜನರ ದುಃಖಕ್ಕೆ ಕೊನೆಯಿರದು'' ಎಂದು ವಿವೇಕಾನಂದರು ಘೋಷಿಸುತ್ತಾರೆ. ನಾವು ಸಮಾಜಕ್ಕೆ ಸಲ್ಲಿಸಬಹುದಾದ ಅತ್ಯಂತ ಶ್ರೇಷ್ಠ ಸೇವೆ ಯಾವುದೆಂದರೆ ಜನರಲ್ಲಿ ನೈತಿಕ ಶಕ್ತಿಯ ಶ್ರದ್ಧೆಯನ್ನು ಹೆಚ್ಚಿಸುವುದು.

ನೀತಿವಂತವೂ ಆಧ್ಯಾತ್ಮಿಕಸಂಪನ್ನವೂ ಬಡತನರಹಿತವೂ ಸಂಪದ್ಭರಿತವೂ ಸರ್ವಸಮಾನತೆಯಿಂದ ಕೂಡಿದ್ದೂ, ಸಂಸ್ಕೃತಿಯಲ್ಲಿ ವಿಶ್ವಶ್ರೇಷ್ಠವೂ ಅಜೇಯವೂ ಆದ ಭವ್ಯ ಭಾರತ – ಇದು ಸ್ವಾಮಿ ವಿವೇಕಾನಂದರ ಭವಿಷ್ಯ ಭಾರತದ ಕಲ್ಪನೆ.

ನೂರು ವರ್ಷಗಳ ನಂತರ ಭಾರತದ ಈಗಿನ ಪರಿಸ್ಥಿತಿ ಹೇಗಿದೆ? ವಿವೇಕಾನಂದರ ಕನಸನ್ನು ನನಸಾಗಿಸುವುದರಲ್ಲಿ ನಾವು ಯಶಸ್ವಿಯಾಗಿದ್ದೇವೆಯೆ? ಇಂದಿಗೂ ಕೂಡ ಬಡತನವೇ ಭಾರತದ ಸಂಪತ್ತಾಗಿದೆ. ಬಡತನ ನಿರ್ಮೂಲನದ ಘೋಷಣೆಯನ್ನು ಕೂಗುತ್ತಲೇ ಮತಗಳಿಕೆಗಾಗಿ ಬಡತನವನ್ನು ಉಳಿಸಿಕೊಳ್ಳುವ ಪ್ರಯತ್ನ ನಡೆಯುತ್ತಿದೆ. ಈ ಹೀನಾಯ ಬಡತನ, ಅನಕ್ಷರತೆ ಮತ್ತು ಜನಸಾಮಾನ್ಯರ ಅಸಹ್ಯವೆನಿಸುವ ಜೀವನಸ್ಥಿತಿ ಇದು ನಮ್ಮ ಭವ್ಯ ಸಂಸ್ಕೃತಿಗೆ ಶೋಭೆಯೆನಿಸುವುದಿಲ್ಲ. ಭ್ರಷ್ಟಾಚಾರದ ಪೈಶಾಚಿಕ ನರ್ತನ ಎಲ್ಲೆಲ್ಲಿಯೂ ಕಂಡು ಬರುತ್ತಿದ್ದು, ಇದು ನಮ್ಮ ಭಾರತದ ಆಧ್ಯಾತ್ಮಿಕ ಮಹಿಮೆಗೆ ಮಣ್ಣೆರಚುವಂತಿದೆ. ಭಾರತವನ್ನು ಆಧ್ಯಾತ್ಮಿಕ ಪ್ರವಾಹದಿಂದ ತುಂಬಬೇಕೆಂದು ವಿವೇಕಾನಂದರು ಕರೆಕೊಟ್ಟರೆ, ಈಗ ರಾಜಕೀಯವೇ ಎಲ್ಲೆಲ್ಲಿಯೂ ರಾರಾಜಿಸುತ್ತಿದೆ. ಧರ್ಮಕೇಂದ್ರಗಳೇ ವ್ಯಾಪಾರಕೇಂದ್ರಗಳಾಗುತ್ತಿವೆ. ಸಮಾನತೆಯನ್ನು ಸಾರುತ್ತಲೇ ಅಸಮಾನತೆಯನ್ನು ಪೋಷಿಸಲಾಗುತ್ತಿದೆ. ಈ ನಡುವೆ ಭಾರತವನ್ನು ಬಲಾಢ್ಯ ಆರ್ಥಿಕ ಮತ್ತು ಸೈನಿಕ ಶಕ್ತಿಯಾಗಿ ಮಾರ್ಪಡಿಸುವ ತರಾತುರಿ ನಡೆಯುತ್ತಿದೆ. ಜನಸಾಮಾನ್ಯರನ್ನು ಶೋಚನೀಯ ಸ್ಥಿತಿಯಲ್ಲಿರಿಸಿ ಭ್ರಷ್ಟಾಚಾರವನ್ನು ಸುಸ್ಥಿತಿಯಲ್ಲಿರಿಸಿ, ದೇಶವನ್ನು ಒಂದು ಬಲಾಢ್ಯ ರಾಷ್ಟ್ರವನ್ನಾಗಿ ಮಾರ್ಪಡಿಸುವುದರಲ್ಲಿ ಯಾವ ಹೆಗ್ಗಳಿಕೆ ತಾನೇ ಇದೆ?

ಸ್ವಾಮಿ ವಿವೇಕಾನಂದರ ಸೇವಾದರ್ಶವನ್ನು ಸ್ವೀಕರಿಸಿ ಅನೇಕ ಶ್ರೇಷ್ಠ ವ್ಯಕ್ತಿಗಳು, ಸಂಘಸಂಸ್ಥೆಗಳು ಅನೇಕಾನೇಕ ರೀತಿಯಲ್ಲಿ ಸಮಾಜಕ್ಕೆ ಸೇವೆಯನ್ನು ಸ್ತುತ್ಯರ್ಹವಾಗಿ ಸಲ್ಲಿಸುತ್ತಿರುವರು. ಆದಾಗ್ಯೂ, ಸಾಮಾಜಿಕ ಪಿಡುಗುಗಳು ಗಮನಾರ್ಹವಾಗಿ ಕಡಿಮೆಯಾದಂತೆ ಕಂಡುಬರುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ, ವಿವೇಕಾನಂದರ ಕರೆಯನ್ನು ಕಡೆಗಣಿಸಿ, ನೀತಿ–ಅಧ್ಯಾತ್ಮದ ಬದಲು ರಾಜಕೀಯಕ್ಕೆ ಹೆಚ್ಚು ಪ್ರಾಧಾನ್ಯವನ್ನು ನೀಡಿದುದು. ಇನ್ನೊಂದು ಕಾರಣ, ವಿವೇಕಾನಂದರು ಬಯಸಿದಂತೆ, ಜನಸಾಮಾನ್ಯರಿಗೆ ಉನ್ನತ ಸಂಸ್ಕೃತಿ ಮತ್ತು ಧರ್ಮವನ್ನು ನೀಡಿ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನವನ್ನು ಪರಿಣಾಮಕಾರಿಯಾಗಿ ಮಾಡದೇ ಇದ್ದುದು. ಅವರಿಗೆ ನಾವು ದೂರದಿಂದ ಭೌತಿಕ ಸಹಾಯವನ್ನು ಮಾಡುತ್ತೇವೆ. ಇದರಿಂದ ಅವರ ಬಡತನ ಮತ್ತು ಹಿಂದುಳಿದಿರುವಿಕೆ ಹಾಗೆಯೇ ಉಳಿಯುತ್ತದೆ. ಕುಳಿತಲ್ಲಿಯೇ ಭೌತಿಕ ಆವಶ್ಯಕತೆಗಳ ಪೂರೈಕೆಯಾಗುತ್ತಿದ್ದರೆ ಬಡವರು ಬಡವರಾಗಿಯೇ ಇರುತ್ತಾರೆ. ಅವರನ್ನು ಕಾಡುತ್ತಿರುವ ಮುಖ್ಯ ದೋಷವೆಂದರೆ ಅವರು ತಮ್ಮ ಸ್ಥಿತಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡಿರುವುದು, ಅದರಲ್ಲೇ ತೃಪ್ತರಾಗಿ ಉಳಿದಿರುವುದು, ನಾನು ಚೆನ್ನಾಗಿದ್ದೇನೆ ಎಂಬ ಮನೋಭಾವ. ಅವರ ಈ ಮನಸ್ಥಿತಿಯನ್ನು ಬದಲಾಯಿಸಬೇಕು, ಉನ್ನತಿಯನ್ನು ಸಾಧಿಸುವ ಛಲವನ್ನು ಅವರಲ್ಲಿ ಜಾಗೃತಗೊಳಿಸಬೇಕು ಆದರೆ ಅದು ನಿರ್ನಾಮಕಾರಿಯಾಗಬಾರದು, ನಿರ್ಮಾಣಕಾರಿಯಾಗಿರಬೇಕು. ಈ ಪರಿಸ್ಥಿತಿ ಬಹಳ ಕಾಲ ಮುಂದುವರಿಯಲಾರದು. ಭಾರತದಲ್ಲಿ ಪ್ರಗತಿ ಮಂದಗತಿಯಲ್ಲಿಯೇ ನಡೆಯುವಂತಹುದು ಮತ್ತು ಇಂತಹ ಪ್ರಗತಿಯೇ ಬಹುಕಾಲ ಮುಂದುವರಿಯುವಂತಹುದು. ಸ್ವಾಮಿ ವಿವೇಕಾನಂದರಂತಹ ಯುಗಪುರುಷರ ಭವಿಷ್ಯ ಸುಳ್ಳಾಗಲಾರದು. ಅವರ ಕ್ರಾಂತದೃಷ್ಟಿಗೆ ಕಂಡ ಭವ್ಯಭಾರತ ಚಿತ್ರವನ್ನು ಮನಸ್ಸಿನಲ್ಲಿಟ್ಟುಕೊಂಡು, ಅವರ ಈ ಕೆಳಗಿನ ನುಡಿಗಳಿಂದ ಭರವಸೆಯನ್ನು ಪಡೆದು ಕಾರ್ಯೋನ್ಮುಖರಾಗೋಣ: ''ಸಹೋದರರೇ, ಎಲ್ಲರೂ ಕಷ್ಟಪಟ್ಟು ದುಡಿಯೋಣ. ನಿದ್ರೆಗೆ ಇದು ಸಮಯವಲ್ಲ. ನಮ್ಮ ಇಂದಿನ ಕಾರ್ಯದ ಮೇಲೆ ಭವಿಷ್ಯ ಭಾರತ ನಿಂತಿದೆ. ನಮಗಾಗಿ ಆಕೆ ಕಾಯುತ್ತಿರುವಳು. ಆಕೆ ಕೇವಲ ನಿದ್ರಿಸುತ್ತಿರುವಳು ಅಷ್ಟೆ. ಜಾಗೃತರಾಗಿ, ಏಳಿ, ಎದ್ದು ನೋಡಿ. ಹಿಂದಿಗಿಂತಲೂ ಹೆಚ್ಚು ವೈಭವಪೂರ್ಣಳಾಗಿ, ಬಲಿಷ್ಠಳಾಗಿ ನಮ್ಮ ಭಾರತಮಾತೆ ಶೋಭಾಯಮಾನವಾಗಿರುವ ಸನಾತನ ಸಿಂಹಾಸನದ ಮೇಲೆ ಮಂಡಿಸಿರುವುದನ್ನು ನೋಡಿ. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೩, ಪು.೪೩)* ಭರತಖಂಡ ಉತ್ಕರ್ಷವಾಗುತ್ತದೆ – ದಂಷ್ಟ್ರನಖಗಳ ಶಕ್ತಿಯಿಂದಲ್ಲ, ಆತ್ಮಶಕ್ತಿಯಿಂದ. ಒಂದು ದೃಶ್ಯ ಮಾತ್ರ ಹಗಲಿನಂತೆ ಸ್ಪಷ್ಟವಾಗಿ ನನ್ನ ಕಣ್ಣ ಮುಂದೆ ಕಾಣುತ್ತಿದೆ. ಈ ಪುರಾತನ ಮಾತೆ ಪುನಃ ಜಾಗೃತಳಾಗಿರುವಳು, ತನ್ನ ಸಿಂಹಾಸನದ ಮೇಲೆ ಮಂಡಿಸಿರುವಳು. ಎಂದಿಗಿಂತ ಹೆಚ್ಚು ಶೋಭಾಯಮಾನಳಾಗಿರುವಳು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೫, ಪು.೩೦೧–೨)*

''ಪ್ರತಿಯೊಬ್ಬ ಸ್ತ್ರೀಪುರುಷರನ್ನು ದೇವರಂತೆ ನೋಡಿ. ನೀವು ಯಾರಿಗೂ ಸಹಾಯ ಮಾಡಲಾರಿರಿ. ಬೇಕಾದರೆ ನೀವು ಸೇವೆ ಮಾಡಬಹುದು. ನಿಮಗೆ ಆ ಭಾಗ್ಯ ಬಂದರೆ ನೀವು ಭಗವಂತನ ಮಕ್ಕಳನ್ನು ಪೂಜಿಸಬಹುದು; ಆತನನ್ನು ಪೂಜಿಸಬಹುದು. ಭಗವಂತನು ತನ್ನ ಮಕ್ಕಳ ಸೇವೆಗೆ ನಿಮಗೆ ಅವಕಾಶ ಒದಗಿಸಿ ಕೊಟ್ಟರೆ ನೀವೇ ಧನ್ಯರು ಎಂದು ಭಾವಿಸಿ. ನಿಮ್ಮ ಸಮಾನವಿಲ್ಲವೆಂದು ಭಾವಿಸಬೇಡಿ. ಆ ಸದವಕಾಶ ಇತರರಿಗೆ ದೊರೆಯದೆ ಇರುವಾಗ, ನಿಮಗೆ ದೊರೆತುದಕ್ಕೆ ನೀವೇ ಧನ್ಯರು. ಅದನ್ನು ಒಂದು ಪೂಜೆಯಂತೆ ಮಾಡಿ. ನಾವು ಬಡವನಲ್ಲಿ ದೇವರನ್ನು ನೋಡಬೇಕು.''

*– ಸ್ವಾಮಿ ವಿವೇಕಾನಂದ*

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೨



**ಪ**ಂಚತಪದ ಬಗ್ಗೆ ಹೇಳಲು ನಾನು ಒತ್ತಾಯಿಸಿದೆ. ಆಗ ಶ್ರೀಮಾತೆ ಹೇಳತೊಡಗಿದರು: ''ಠಾಕೂರರ ದೇಹತ್ಯಾಗವಾದ ನನಗೆ ಎಷ್ಟೊಂದು ಸಂಕಟವಾಯಿತೆಂದರೆ, ಜೀವಿಸುವುದೇ ಅಸಾಧ್ಯವಾಗಿ ಹೋಯಿತು. 'ಇಂಥ ಅದ್ಭುತ ಠಾಕೂರರೇ ಹೋಗಿಬಿಟ್ಟರು, ಇನು ನಾನೇಕೆ ಬದುಕಿರಲಿ?' ಅನ್ನಿಸತೊಡಗಿತು. ನನಗೆ ಯಾವುದೂ ಬೇಡವಾಗಿತ್ತು. ಯಾರೊಂದಿಗೆ ಮಾತನಾಡುವುದೂ ಬೇಕಾಗಿರಲಿಲ್ಲ. ಹುಡುಗರೆಲ್ಲ (ಶ್ರೀರಾಮಕೃಷ್ಣರ ಶಿಷ್ಯಂದಿರು) ನನ್ನ ಅವಸ್ಥೆಯನ್ನು ಅರ್ಥಮಾಡಿಕೊಂಡು ನನ್ನನ್ನು ಹಲವು ತೀರ್ಥಯಾತ್ರೆಗೆ ಕಳುಹಿಸಿ ಸುತ್ತಾಡಿಸಿದರು. ಅದರಿಂದಲಾದರೂ ನನ್ನ ಮನಸ್ಸು ಶಾಂತವಾಗಬಹುದು ಅಂತ ಅವರ ಆಸೆ. ಲಾಟು(ಸ್ವಾಮಿ ಅದ್ಭುತಾನಂದ), ಯೋಗಿನ್(ಸ್ವಾಮಿ ಯೋಗಾನಂದ), ಶರತ್ (ಸ್ವಾಮಿ ಶಾರದಾನಂದ) ಇವರೆಲ್ಲ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ನಾನು ಕಾಶಿಯಲ್ಲಿದ್ದಾಗ ಅಲ್ಲಿ ಒಬ್ಬಳು ನೇಪಾಳಿ ಹೆಂಗಸು ನನ್ನ ಬಳಿಗೆ ಆಗಾಗ ಬರುತ್ತಿದ್ದಳು. ಅವಳು ಸಂನ್ಯಾಸಿನಿ, ಅನೇಕ ಬಗೆಯ ಸಾಧನೆಗಳು ಅವಳಿಗೆ ತಿಳಿದಿದ್ದವು. ನನ್ನ ಅವಸ್ಥೆಯನ್ನು ನೋಡಿ ಒಂದು ದಿನ ಅವಳು, 'ಅಮ್ಮಾ, ನೀವು ಪಂಚತಪ ಮಾಡಿ' ಎಂದಳು. ಅವಳು ಎಷ್ಟು ಒಳ್ಳೆಯವಳು! ಅವಳು ಹಾಗೆ ಹೇಳಿದ್ದರಿಂದ, ಮನಸ್ಸು ಶೂನ್ಯವಾದಾಗಲೆಲ್ಲ ಪಂಚತಪ ಮಾಡಿದರೆ ನನ್ನ ಮನಸ್ಸಿನ ಬೇಗೆ ಆರಬಹುದು ಅನ್ನಿಸುತ್ತಿತ್ತು. ನಾನು ದೇಹವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದೆ – ಏಕೆಂದರೆ ಒಂದು ದಿನ ಠಾಕೂರರು ಕಾಣಿಸಿಕೊಂಡು 'ನೀನು ಸಾಯಬಾರದು, ನೀನು ಬದುಕಬೇಕು' ಎಂದು ಹೇಳಿದ್ದರು. ಆಗಿನಿಂದ ಕೆಲವೊಮ್ಮೆ ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತಿದ್ದೆ, 'ಇಲ್ಲ, ನಾನು ಬದುಕಿರಲಾರೆ, ಬದುಕಿ ಏನು ಪ್ರಯೋಜನ?' ಅಂತ. ಮತ್ತೆ ಠಾಕೂರರ ಮಾತು ನೆನಪಾಗಿ ದೇಹ ಉಳಿಸಿಕೊಳ್ಳಲು ಯತ್ನಿಸತೊಡಗಿದೆ. ಆ ದಿನಗಳಲ್ಲಿ ಏನೆಲ್ಲ ನಡೆದುಹೋದವು, ಅವನ್ನೆಲ್ಲ ನಿನಗೆ ಹೇಗೆ ಹೇಳಲಿ! ಆಮೇಲೆ ಠಾಕೂರರು ಹುಣ್ಣಿಮೆಯ ದಿನ ರಾತ್ರಿಹೊತ್ತು ಗಂಗೆಯಲ್ಲಿ ಲೀನವಾಗಿ ಹೋದದ್ದನ್ನು ಕಂಡ ಮೇಲಂತೂ ದೇಹವನ್ನು ಉಳಿಸಿಕೊಳ್ಳಬೇಕು ಎಂದು ನಿರ್ಧರಿಸಿದೆ. ಠಾಕೂರರ ಮಾತು ನೆನಪಾಗುತ್ತಿತ್ತು. ಅವರು, 'ನೀನು ಸಾಯಬಾರದು. ನೀನು ಬದುಕಬೇಕು. ನಾನು ಎಷ್ಟು ಮಂದಿ ಜನರನ್ನು ನೋಡಿಕೊಂಡೆ? ನಿನ್ನ ಬಳಿಗೆ ತುಂಬಾ ಜನ ಬರುತ್ತಾರೆ. ನೀನು ಅವರೆಲ್ಲರ ಭಾರ ಹೊತ್ತುಕೊಳ್ಳಬೇಕು' ಎಂದಿದ್ದರು. ಇವೆಲ್ಲ ನೆನಪಾಗಿ ರಾತ್ರಿಯಿಡೀ ನಿದ್ದೆ ಬರಲಿಲ್ಲ. ಬೆಳಿಗ್ಗೆ ಯೋಗಿನ್‌ಳನ್ನು (ಯೋಗಿನ್ ಮಾ, ಶ್ರೀರಾಮಕೃಷ್ಣರ ಭಕ್ತೆ) ಕರೆದು, ಪಂಚತಪ ಮಾಡಲು ಸಿದ್ಧತೆ ಮಾಡು ಎಂದು ಹೇಳಿದೆ. ಗೋಲಾಪ್ ಹಾಗೂ ಯೋಗಿನ್ ಇಬ್ಬರೂ ತಾರಸಿ ಮೇಲೆ ಮಣ್ಣು ಹಾಕಿ, ಬೆರಣಿಯನ್ನಿಟ್ಟು ಸಿದ್ಧತೆ ಮಾಡಿದರು.

''ಪಂಚತಪವನ್ನು ಮಾಡುವ ದಿನ ಬಂದಾಗ ನನ್ನೆದೆ ಢವಢವ ಹೊಡೆದುಕೊಳ್ಳಲಾರಂಭಿಸಿತು. ಬೆಂಕಿಯ ಮಧ್ಯೆ ಹೇಗೆ ಪ್ರವೇಶಿಸಲಿ ಎಂದು ಭಯವಾಗತೊಡಗಿತು. ಅದು ಯಾವ ರೀತಿ ಅಂತ ತಿಳಿಯಿತೆ? ನಾಲ್ಕೂಕಡೆ ಐದೈದು ಕೈಯಳತೆ ದೂರದಲ್ಲಿ ಉರಿಯುತ್ತಿರುವ ಬೆಂಕಿಯ ಕೆಂಡವನ್ನು ರಾಶಿ ಮಾಡಿ ಹಾಕಲಾಗಿತ್ತು; ಅದು ಭಗಭಗನೆ ಉರಿಯುತ್ತಿತ್ತು. ತಲೆಯ ಮೇಲೆ ಮಧ್ಯಾಹ್ನದ ಉರಿಬಿಸಿಲು. ಆಗಲಂತೂ ಅಸಾಧ್ಯ ಬೇಸಿಗೆ; ಗಂಗೆಯಲ್ಲಿ ಸ್ನಾನ ಮಾಡಿ ಬಂದು 'ಹೇಗೆ ಈ ಬೆಂಕಿಯ ನಡುವೆ ಪ್ರವೇಶಿಸಲಿ?' ಎಂದು ಚಿಂತಿಸತೊಡಗಿದೆ. ಆಗ ಯೋಗಿನ್ ಬಂದು ನನಗೆ ಧೈರ್ಯ ನೀಡಿದಳು, 'ಅಮ್ಮಾ, ಒಳಗೆ ಹೋಗಿ – ಭಯವೇಕೆ?' ಅವಳ ಮಾತಿನಿಂದ ನನಗೆ ಧೈರ್ಯ ಬಂತು. ಶ್ರೀರಾಮಕೃಷ್ಣರನ್ನು

ನೆನೆದು ಒಳಹೊಕ್ಕೆ. ಬೆಂಕಿಯ ನಡುವೆ ಹೋಗಿ ಕುಳಿತುಕೊಂಡೆ. ಸಾಯಂಕಾಲದವರೆಗೂ ಅಲ್ಲಿಯೇ ಕುಳಿತಿದ್ದೆ. ಹೀಗೆ ಐದು ದಿನ ಕಳೆದುಹೋಯಿತು. ನನ್ನ ದೇಹವೆಲ್ಲ ಉರಿದ ಕಟ್ಟಿಗೆಯಾಗಿ ಹೋಗಿತ್ತು. ಆದರೆ ಮನಸ್ಸಿನ ಉರಿ ಶಾಂತವಾಗಿತ್ತು.''

ಸುಶೀಲ್ ಮಹಾರಾಜ್ ಕೇಳಿದರು: ''ನೀವು ಏಕೆ ಅಷ್ಟೊಂದು ಕಷ್ಟಪಡಬೇಕಾಗಿತ್ತು?'' ಅದಕ್ಕೆ ಅವರೆಂದರು, ''ಅದೇಕೆ ಗೊತ್ತೆ, ಮಗೂ? ಎಲ್ಲ ನಿಮಗೋಸ್ಕರ. ಮಕ್ಕಳು ಅಷ್ಟೊಂದು ಮಾಡ ಬಲ್ಲರೆ? ನೋಡು, ಗೋಲಾಪ್ ಹೇಗೆ ಅಷ್ಟೊಂದು ನಿಶ್ಚಿಂತಳಾಗಿ ನಿದ್ದೆ ಮಾಡುತ್ತಿದ್ದಾಳೆ! ಅದಕ್ಕೋಸ್ಕರ ಅದನ್ನೆಲ್ಲ ಮಾಡಬೇಕಾ ಯಿತು. ನಾನಾದರೂ ಏನು ಮಾಡಿದೆ? ಠಾಕೂರರು ಎಷ್ಟೆಷ್ಟೋ ಸಾಧನೆ ಮಾಡಿದ್ದಾರೆ.''

ಈ ಘಟನೆಯ ನಂತರ, ಅಂದರೆ ಶ್ರೀಮಾತೆಯವರು ನೀಲಾಂಬರ ಮುಖ್ಯೋಪಾಧ್ಯಾಯನ ಮನೆಯಲ್ಲಿದ್ದ ಮಠಕ್ಕೆ ಬಂದ ನಂತರ, ೧೦/೨, ಬೋಸ್‌ಪಾರಾ ಲೇನ್‌ನಲ್ಲಿ ಅವರ ಮೊದಲ ಫೋಟೋ ತೆಗೆಯಲಾಯಿತು.[೧] ಆ ಎರಡೂ ಫೋಟೋ ಗಳನ್ನು ಕ್ರಿ.ಶ. ೧೮೯೮ರಲ್ಲಿ ಮಿಸೆಸ್ ಬುಲ್ ಅವರ ವ್ಯವಸ್ಥೆಗೆ ಅನುಗುಣವಾಗಿ ತೆಗೆಯಿಸಲಾಯಿತು.[೨] ಮಿಸೆಸ್ ಬುಲ್, ಭಗಿನಿ ನಿವೇದಿತಾ ಹಾಗೂ ಮಿಸ್ ಮ್ಯಾಕ್ಲೌಡ್ ಅವರು ಆಗ ಬೇಲೂರಿ ನಲ್ಲಿದ್ದ ಈಗಿನ ಮಠದ ಹಳೆಯ ಎರಡು ಕೋಣೆಗಳಲ್ಲಿ, ಅಂದರೆ ಈಗ ಇರುವ ಮಠವನ್ನು ಯಾವ ಎರಡು ಕೋಣೆಗಳ ಮೇಲಂತಸ್ತಿ ನಲ್ಲಿ ನಿರ್ಮಿಸಲಾಗಿದೆಯೋ, ಆ ಕೋಣೆಗಳಲ್ಲಿ ವಾಸಿಸುತ್ತಿದ್ದರು.[೩]

ಈ ಘಟನೆಯ ನಂತರ ನಾವಿಬ್ಬರೂ ಎರಡು ಬಾರಿ ಶ್ರೀಮಾತೆಯವರ ಕೋಣೆಯಲ್ಲಿ ಇರಬೇಕಾಯಿತು. ಮೊದಲ ಬಾರಿ ಮೂರು ದಿನ, ಎರಡನೆಯ ಬಾರಿ ಎರಡು ದಿನ. ಈ ಸಮಯದಲ್ಲಿ ಪ್ರತಿದಿನವೂ ರಾತ್ರಿ ಹೊತ್ತು ಎರಡನೆಯ ಅಥವಾ ಮೂರನೇ ಪ್ರಹರದಲ್ಲಿ ಪರಮಭಕ್ತ, ನಾಟ್ಯಸಾಮ್ರಾಟ್ ಗಿರೀಶ ಚಂದ್ರ ಕುಡಿದ ಅಮಲಿನೊಂದಿಗೆ ತನ್ನ ಥಿಯೇಟರಿನಿಂದ ಮರಳು ತ್ತಿದ್ದ. ತನ್ನ ಗಾಡಿಯಿಂದ ಇಳಿದು ಉನ್ಮತ್ತನಾಗಿದ್ದುಕೊಂಡೇ 'ಶಶಿಯ ತಾಯಿ' ಎಂಬ ಒಬ್ಬ ಕಡಲೆಪುರಿ ಮಾರುವವಳಿಗೆ ನೂರಾರು ಬೈಗುಳದ ಮಳೆ ಸುರಿಸುತ್ತಾ ತನ್ನ ಮನೆಗೆ ಮರಳುತ್ತಿದ್ದ. ಶಶಿಯ ತಾಯಿ ಆಗ ತನ್ನ ಅಂಗಡಿಯ ಒಳಗೆ ಮಲಗಿ ನಿದ್ರಿಸು ತ್ತಿದ್ದಳು. ಗಿರೀಶ್‌ಚಂದ್ರ ಈ ರೀತಿ ಪ್ರತಿದಿನವೂ ಗದ್ದಲವೆಬ್ಬಿಸಿದಾಗ ನಮಗೆ ನಿದ್ರಾಭಂಗವಾಗುತ್ತಿತ್ತು. ಮರುದಿನ ಬೆಳಿಗ್ಗೆ ಶ್ರೀಮಾತೆ ಹೇಳುತ್ತಿದ್ದರು, ಆತ ಹಾಗೆ ಮಾಡಿದಾಗಲೆಲ್ಲ ಅವರಿಗೆ ತುಂಬ ಹೆದರಿಕೆಯಾಗುತ್ತಿತ್ತು ಎಂದು.

ಶ್ರೀಮಾತೆಯವರ ಮನೆ ಗಿರೀಶಚಂದ್ರನ ಮನೆಯ ಉತ್ತರ ಭಾಗದಲ್ಲಿತ್ತು. ನಡುವೆ ಸಣ್ಣದಾದ ಒಂದು ಬೀದಿ. ಗಿರೀಶನ ಗಾಡಿ ಶ್ರೀಮಾತೆಯವರ ಮನೆಯ ಮುಂದೆ ಹಾದು ಹೋಗುತ್ತ, ಅಲ್ಲೊಂದು ಬಾರಿ ನಿಲ್ಲುತ್ತಿತ್ತು; ಮತ್ತನಾಗಿರುತ್ತಿದ್ದ ಗಿರೀಶಚಂದ್ರ ನನ್ನು ಅವನ ಸೇವಕ ಆಧರಿಸಿ ಕರೆದುಕೊಂಡು ಹೋಗುತ್ತಿದ್ದ.

ಒಂದು ದಿನ ಕತ್ತಲಾದ ಮೇಲೆ ನಾನು ಸ್ವಾಮಿ ವಿವೇಕಾ ನಂದರೊಂದಿಗೆ ಶ್ರೀಮಾತೆಯವರ ಮನೆಗೆ ಹೋದೆ. ಸ್ವಾಮೀಜಿ ಆಗ ತಾನೇ ಕಾಶ್ಮೀರದಿಂದ ಮರಳಿ ಬಂದಿದ್ದರು. ಅವರೊಂದಿಗೆ ಖಗೇನ್ ಮಹಾರಾಜ್ (ಸ್ವಾಮಿ ವಿಮಲಾನಂದ) ಹಾಗೂ ಸುಶೀಲ್ ಮಹಾರಾಜ್ ಕೂಡ ಇದ್ದರು. ಯೋಗಿನ್ ಮಹಾ ರಾಜ್, ಕೃಷ್ಣಲಾಲ್ ಹಾಗೂ ನಾನು ಸ್ವಾಮೀಜಿಯವರೊಂದಿಗೆ ಶ್ರೀಮಾತೆಯವರ ಬಳಿಗೆ ಮೇಲಂತಸ್ತಿಗೆ ಹೋದೆವು. ಶ್ರೀಮಾತೆ ತಮ್ಮ ಇಡೀ ದೇಹವನ್ನು ಉತ್ತರೀಯದಿಂದ ಆವೃತಗೊಳಿಸಿ, ಕೋಣೆಯ ಒಂದು ಮೂಲೆಯಲ್ಲಿ ನಿಂತಿದ್ದರು. ಕೃಷ್ಣಲಾಲ್ ಅವರ ಬಳಿ ನಿಂತು, ಅವರು ನೀಡುತ್ತಿದ್ದ ಉತ್ತರವನ್ನು ಸ್ವಾಮೀಜಿ ಯವರಿಗೆ ತಿಳಿಸುತ್ತಿದ್ದ.

ಇಲ್ಲಿ ಒಂದು ಸಂಗತಿಯನ್ನು ತಿಳಿಸುವುದು ಯುಕ್ತವೆನಿಸುತ್ತದೆ. ಶ್ರೀಮಾತೆ ಒಂದಿಬ್ಬರನ್ನು ಹೊರತುಪಡಿಸಿ, ಬೇರೆ ಯಾರೇ ಹಿರಿಯ ಗಂಡಸರೊಂದಿಗೆ ಮಾತನಾಡಿದ್ದನ್ನು ನಾವೆಂದಿಗೂ ನೋಡಿಲ್ಲ. ಅಂಥ ಸಂದರ್ಭದಲ್ಲಿ ಯಾರಾದರೂ ಹುಡುಗರು ಅವರ ಬಳಿ ಇರಬೇಕಿತ್ತು. ಅವರು ಯಾರ ಬಳಿ ಮಾತನಾಡಬೇಕಿತ್ತೋ ಅದನ್ನು ಅವರು ತಿಳಿಸುತ್ತಿದ್ದರು. ಅವರು ಮಾತನಾಡುತ್ತಿದ್ದ ಹಿರಿಯ ಗಂಡಸರೆಂದರೆ ಲಾಟು ಮಹಾರಾಜ್, ಗೋಪಾಲ್ ದಾ ಅಥವಾ ದೊಡ್ಡ ಗೋಪಾಲ್ (ಸ್ವಾಮಿ ಅದ್ವೈತಾನಂದ) ಹಾಗೂ ಭಕ್ತಶ್ರೇಷ್ಠನಾದ ನಾಗ ಮಹಾಶಯ. ಯಾರೊಂದಿಗೆ ಅವರು ನೇರ ಮಾತನಾಡುತ್ತಿರಲಿಲ್ಲವೋ ಅಂಥವರು ಬಂದಾಗ ಶ್ರೀಮಾತೆ ತಮ್ಮ ಸರ್ವಾಂಗವನ್ನೂ ವಸ್ತ್ರದಿಂದ ಹೊದ್ದುಕೊಂಡು (ಪಾದ ಗಳನ್ನು ಹೊರತುಪಡಿಸಿ) ನಿಂತುಬಿಡುತಿದ್ದರು. ಅವರು ಹೊರಟು ಹೋದ ಬಳಿಕ ಉತ್ತರೀಯವನ್ನು ತೆಗೆದುಬಿಡುತ್ತಿದ್ದರು.

ಸ್ವಾಮೀಜಿ ಶ್ರೀಮಾತೆಯವರ ಬಳಿಗೆ ಬಂದು ಅವರಿಗೆ ಪ್ರಣಾಮ ಮಾಡಿದಾಗ, ಶ್ರೀಮಾತೆ ತಾವು ಹೊದ್ದುಕೊಂಡಿದ್ದ ಉತ್ತರೀಯದ ಒಳಗಿನಿಂದ ಬಲಗೈಯನ್ನು ಚಾಚಿ, ಸ್ವಾಮೀಜಿ ಯವರ ಹಣೆಯನ್ನು ಸ್ಪರ್ಶಿಸಿ ಆಶೀರ್ವದಿಸಿದರು. ಸ್ವಾಮೀಜಿ ಯವರ ನಂತರ ನಾವೆಲ್ಲ ಒಬ್ಬೊಬ್ಬರಾಗಿ ಪ್ರಣಾಮ ಮಾಡಿ ಬಂದು ಎಲ್ಲರೂ ಕೋಣೆಯ ಹೊರಗಿನ ಚಾವಡಿಯಲ್ಲಿ ಕುಳಿ

೧ ಕೆಲವರ ಪ್ರಕಾರ ಇಲ್ಲಿ ಲೇಖಕರ ನೆನಪು ತಪ್ಪಾಗಿದೆ; ಶ್ರೀಮಾತೆಯವರ ಮೊದಲ ಭಾವಚಿತ್ರವನ್ನು ತೆಗೆದುದು ೧೬, ಬೋಸ್‌ಪಾರಾ ಲೇನಿನಲ್ಲಿದ್ದ ನಿವೇದಿತಾಳ ನಿವಾಸದಲ್ಲಿ ಎಂದು ಅವರು ಅಭಿಪ್ರಾಯಪಡುತ್ತಾರೆ. ಆದರೆ ಆಶುತೋಷ ಮಿತ್ರ ನೀಡುವ ಮಾಹಿತಿ ಸರಿ. ಆಗ ಶ್ರೀಮಾತೆಯವರು ಇದ್ದ ೧೦/೨ನೇ ಬೋಸ್‌ಪಾರಾ ಲೇನಿನಲ್ಲಿದ್ದ ಬಾಡಿಗೆ ಮನೆಯಲ್ಲೇ ಈ ಚಿತ್ರಗಳನ್ನು ತೆಗೆಯಲಾಯಿತು. – *ಸಂ.*

೨ ನಿಜವಾಗಿ ಎರಡು ಭಾವಚಿತ್ರಗಳನ್ನಲ್ಲ, ಮೂರನ್ನು ತೆಗೆಯಲಾಯಿತು. ಕ್ರಿ .ಶ. ೧೮೯೮ರ ಅಗ್ರಹಾಯಣ (ನವೆಂಬರ್) ತಿಂಗಳಲ್ಲಿ. – *ಸಂ.*

೩ ಹಿಂದಿನ ಮಠದ ಕೋಣೆಯೆಂದರೆ ಈಗಿನ 'ಸ್ವಾಮೀಜಿಯವರ ಕೋಣೆ'ಯ ಮೇಲಂತಸ್ತು . – *ಸಂ.*



**ಸ್ವಾಮೀಜಿ (ಕಾಶ್ಮೀರದ ಚಿತ್ರ)**

ತೆವು. ಶ್ರೀಮಾತೆ ಮತ್ತು ಕೃಷ್ಣಲಾಲ್ ಒಳಗಡೆ ಉಳಿದರು. ಸ್ವಾಮೀಜಿ ದೂರು ಸಲ್ಲಿಸುತ್ತ ಹೇಳಿದರು, ''ಅಮ್ಮಾ, ನೋಡಿ, ನಿಮ್ಮ ಠಾಕೂರರನ್ನು! ಕಾಶ್ಮೀರದಲ್ಲಿ ಒಬ್ಬ ಫಕೀರ, ಆತನ ಶಿಷ್ಯ ನನ್ನ ಬಳಿಗೆ ಬಂದು ಹೋಗುತ್ತಿದ್ದನೆಂದು ನನಗೆ ಶಾಪ ಕೊಟ್ಟ, 'ಮೂರು ದಿನದೊಳಗಾಗಿ ಈತನಿಗೆ ಭೇದಿಯಾಗಿ ಇವನು ಇಲ್ಲಿಂದ ಹೋಗುವಂತಾಗಲಿ' ಅಂತ. ಹಾಗೇ ಆಗಿಬಿಟ್ಟಿತು. ನಾನು ಓಡಿ ಬಂದುಬಿಟ್ಟೆ , ಬಂದ ದಾರಿಯೂ ತಿಳಿಯದಂತೆ. ನಿಮ್ಮ ಠಾಕೂರ್‌ಗೆ ಏನೂ ಮಾಡಲಾಗಲಿಲ್ಲ!'' ಅದಕ್ಕೆ ಶ್ರೀಮಾತೆ ಉತ್ತರ ನೀಡಿದರು: ''ಅದೂ ವಿದ್ಯೆ; ವಿದ್ಯೆಯನ್ನು ಗೌರವಿಸ ಬೇಕು, ಮಗೂ. ಎಲ್ಲ ವಿದ್ಯೆಯೂ ವಿದ್ಯೆಯೇ ಅಲ್ಲವೇ; ಅವರೆಲ್ಲ (ಶ್ರೀರಾಮಕೃಷ್ಣರು ಹಾಗೂ ಅವರಂಥವರು) ಏನನ್ನೂ ಕೆಡವಿ ಹಾಕಲು ಬರಲಿಲ್ಲ. ನಮ್ಮ ಠಾಕೂರರಂತೂ ಎಲ್ಲವನ್ನೂ ನಂಬು ತ್ತಿದ್ದರು, ಸೀನುವುದು, ಹಲ್ಲಿಯ ಧ್ವನಿ ಹೀಗೆ ಎಲ್ಲವನ್ನೂ. ಶಂಕರಾ ಚಾರ್ಯರೂ ಕೂಡ ತಮ್ಮ ದೇಹದ ಮೇಲೆ ವ್ಯಾಧಿಯನ್ನು ಬರಿಸಿಕೊಂಡರು ಎಂದು ಕೇಳುತ್ತೇವೆ. ನಿನ್ನ ದೇಹಕ್ಕೆ ಅನಾರೋಗ್ಯ ವಾಗುವುದೂ ಒಂದೇ, ಠಾಕೂರರ ದೇಹಕ್ಕೆ ಅನಾರೋಗ್ಯವಾಗು ವುದೂ ಒಂದೇ.'' ಅದಕ್ಕೆ ಸ್ವಾಮೀಜಿ, ''ಓ! ನೀವೇನೇ ಹೇಳಿ ದರೂ, ನಾನು ನಿಮ್ಮ ಮಾತನ್ನು ಒಪ್ಪಲಾರೆ. ಈ ಬ್ರಾಹ್ಮಣ (ಶ್ರೀರಾಮಕೃಷ್ಣರು) ಅವನ ಮುಂದೆ ಏನೇನೂ ಅಲ್ಲ''ಎಂದರು. ಅದಕ್ಕೆ ಶ್ರೀಮಾತೆ, ''ನೀನು ಒಪ್ಪದಿರಲು ಹೇಗೆ ಸಾಧ್ಯ? ನಿನ್ನ ಜುಟ್ಟು ಅವರ ಕೈಯಲ್ಲಿ ತಾನೆ?'' ಎಂದರು. ಸ್ವಾಮೀಜಿ ಒದ್ದೆ ಯಾದ ಕಣ್ಣುಗಳೊಂದಿಗೆ ಎದ್ದು ನಿಂತರು. ಅನಂತರ ಶ್ರೀಮಾತೆ ಯವರ ಪಾದಗಳನ್ನು ಕೆಲವು ಕ್ಷಣ ಸ್ಪರ್ಶಿಸಿ, ಬಳಿಕ ಅಲ್ಲಿಂದ ಕೆಳಗಿಳಿದು ಬಂದರು. ನಾವೆಲ್ಲರೂ ಅವರ ಹಿಂದೆಯೇ ಹೋದೆವು.

ಕೃಷ್ಣಲಾಲ್ ಪ್ರಸಾದವನ್ನು ತಂದುಕೊಟ್ಟ. ಅದನ್ನು ಸ್ವಾಮೀಜಿ ಹಣೆಗೆ ಸ್ಪರ್ಶಿಸಿಕೊಂಡು ಸ್ವೀಕರಿಸಿದರು.

ಇಂದು ಶ್ಯಾಮಾಪೂಜೆಯ ದಿನ. ಇಷ್ಟರಲ್ಲೇ ಬೇಲೂರಿನ ಹೊಸ ಮಠದ ನಿರ್ಮಾಣವಾಗಿತ್ತು. ನೀಲಾಂಬರ ಮುಖ್ಯೋಪಾ ಧ್ಯಾಯನ ಉದ್ಯಾನದ ಮನೆಯಿಂದ ಮಠದ ನಿವಾಸಿಗಳೆಲ್ಲರೂ ತಮ್ಮದೇ ಆದ ನಿವಾಸಕ್ಕೆ (ಈಗಿನ ಬೇಲೂರು ಮಠ) ಬಂದಿದ್ದರು. ಸೋದರಿ ನಿವೇದಿತಾ ಹಾಗೂ ಇಬ್ಬರು ವಿದೇಶೀ ಮಹಿಳೆಯರು ಬೇಲೂರು ಮಠದ ನಿರ್ಮಾಣ ಆರಂಭವಾಗುವ ಮೊದಲಿ ನಿಂದಲೇ ಬಾಲಿ(ಕಲ್ಕತ್ತೆಯ ಒಂದು ಪ್ರದೇಶ)ಯಲ್ಲಿರುವ ರಿವರ್ ಥಾಮ್ಸನ್ ಸ್ಕೂಲ್ ಕಟ್ಟಡದ ಬಳಿ, ಗಂಗಾನದಿತೀರದಲ್ಲಿ ಒಂದು ಸುಂದರವಾದ ಸಣ್ಣ ಮನೆಯಲ್ಲಿ ಇರುತ್ತಿದ್ದರು. ಈಗ ಆ ವಿದೇಶಿ ಮಹಿಳೆಯರಿಬ್ಬರೂ ತಮ್ಮ ದೇಶಕ್ಕೆ ಮರಳಿದ್ದರಿಂದ, ನಿವೇದಿತಾ ಬೋಸ್‌ಪಾರಾ ಲೇನ್‌ನ ೧೬ನೇ ನಂಬರಿನ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಳು, ಅಲ್ಲಿ 'ಬಾಲಿಕಾ ವಿದ್ಯಾಲಯ'ವನ್ನು ನಡೆಸುವ ಸಲುವಾಗಿ.[೨]

ಶ್ರೀ ಶ್ರೀ ಶ್ಯಾಮಾಪೂಜೆಯ ಸಂದರ್ಭದಲ್ಲಿ ಬೇಲೂರು ಮಠದಲ್ಲಿ ಎಲ್ಲರಿಗೂ ಅತ್ಯಂತ ಆನಂದದ ದಿನ. ಎಲ್ಲರೂ ಪ್ರಾತಃ ಕಾಲ ಬೇಗನೇ ಎದ್ದಿದ್ದರು. ಎಲ್ಲರ ಮುಖದಲ್ಲಿಯೂ ಆನಂದ ಹೊರಹೊಮ್ಮುತ್ತಿದೆ. ರಾಖಾಲ್ ಮಹಾರಾಜರ ಆದೇಶದಂತೆ ಬೇಲೂರು ಮಠ ಹಾಗೂ ದೇವಾಲಯದ ಬಾಗಿಲಲ್ಲಿ ಮಂಗಲ ಘಟ ಹಾಗೂ ಬಾಳೆಯಗಿಡವನ್ನು ಇಟ್ಟು ಅಲಂಕರಿಸಲಾಗಿದೆ. ನಿಷ್ಠಾವಂತ ಬ್ರಾಹ್ಮಣನಾದ ನಂದಲಾಲ್‌ನ ಆರೋಗ್ಯ ಚೆನ್ನಾಗಿಲ್ಲ ದಿದ್ದರೂ, ಸೊರಗಿದ ದೇಹದೊಂದಿಗೆ ಒಂದೆಡೆ ಮಂದಿರದ ಅಡುಗೆಮನೆ, ಇನ್ನೊಂದೆಡೆ ಶ್ರೀರಾಮಕೃಷ್ಣರ ಪೂಜೆಯ ಸಿದ್ಧ ತೆಯ ಕೆಲಸಗಳಲ್ಲಿ ಮುಳುಗಿಹೋಗಿದ್ದ. ಶರತ್ ಮಹಾರಾಜ್ ಬೇಲೂರು ಮಠದ ಮೇಲ್ವಿಚಾರಕರು – ತಾವೇ ಮಠ, ದೇವಾ ಲಯ, ಅಡುಗೆ ಮನೆ, ದೇವಾಲಯದ ಅಡುಗೆ ಮನೆ, ಇವನ್ನೆಲ್ಲ ಸ್ವಚ್ಛಗೊಳಿಸಿ, ಅಲ್ಲೆಲ್ಲ ಓಡಾಡುತ್ತಿದ್ದಾರೆ. ಸ್ವಾಮೀಜಿ ಬೇಲೂರು ಮಠದಲ್ಲೇ ಇದ್ದಾರೆ. ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸಗಳಲ್ಲಿ ಮುಳುಗಿಬಿಟ್ಟಿದ್ದಾರೆ. ಇಂದು ಶ್ಯಾಮಾಪೂಜೆಗೆ ಬೇಲೂರು ಮಠಕ್ಕೆ ಸಾಕ್ಷಾತ್ ಮಹಾಮಾಯೆ ಶ್ರೀಮಾತೆಯೇ ದಯ ಮಾಡಿಸುವರು. ಆದಕಾರಣವೇ ಇಂದು ಬೇಲೂರು ಮಠದಲ್ಲಿ ಇರುವವರೆಲ್ಲರಿಗೂ ಹಿಡಿಸಲಾರದಷ್ಟು ಆನಂದ ಹರಿಯುತ್ತಿದೆ.[೩]

---

೨ ಬಾಲಿಕಾ ವಿದ್ಯಾಲಯವಿದ್ದ ಈ ಕಟ್ಟಡದಲ್ಲಿ ೧೮೯೮ರ ನವೆಂಬರ್ ೧೩ರ ಭಾನುವಾರದಂದು ಉದ್ಘಾಟನಾ ಕಾರ್ಯಕ್ರಮ ನಡೆಯಿತು. ಅದು ಶ್ಯಾಮಾಪೂಜೆಯ ದಿನ. ಶ್ರೀಮಾತೆಯವರೇ ಆ ಶಾಲೆಯ ಉದ್ಘಾಟನೆ ಯನ್ನು ನೆರವೇರಿಸಿದರು. – *ಸಂ.*

೩ ಸ್ವಾಮಿ ಗಂಭೀರಾನಂದರು ರಚಿಸಿದ ಶ್ರೀಮಾತೆಯವರ ಜೀವನಚರಿತ್ರೆಯ (ಬಂಗಾಳಿಯ '**ಶ್ರೀಮಾ ಸಾರದಾದೇವಿ**' ಗ್ರಂಥದ 'ಮಾಯೇರ್ ಭಾರೀ' ಎಂಬ ಅಧ್ಯಾಯ) ಪ್ರಕಾರ, ಶ್ರೀಮಾತೆ ಬೇಲೂರು ಮಠಕ್ಕೆ ಬಂದುದು

ನೋಡನೋಡುತ್ತಿದ್ದಂತೆ ಶ್ರೀಮಾತೆಯವರು ಇದ್ದ ದೋಣಿ ಬೇಲೂರು ಮಠದ ಘಟ್ಟದ ಬಳಿಗೆ ಬಂದು ಸೇರಿತು. ಅವರೊಂದಿಗೆ ಮೊದಲಿನಂತೆ ಉಳಿದವರೆಲ್ಲ ಬಂದಿದ್ದರು. ಶಾರದಾ ಮಹಾರಾಜ್ ಕೂಡ ಬಹುಶಃ ಅವರೊಂದಿಗಿದ್ದರು. ಕ್ರಮೇಣ ಮಾಸ್ಟರ್ ಮಹಾಶಯ ('ವಚನವೇದ' ದ ರಚನಕಾರ 'ಮ') ಕಿಶೋರಿ ಬಾಬು (ಅಥವಾ ಅಬ್ದುಲ್) ಮೊದಲಾದವರೆಲ್ಲ ಬಂದರು.

ಶ್ರೀಮಾತೆ ದೋಣಿಯಿಂದಿಳಿದು, ಎಲ್ಲರ ಪ್ರಣಾಮಗಳನ್ನು ಸ್ವೀಕರಿಸಿದರು. ಅನಂತರ ಕೈಕಾಲು ತೊಳೆದುಕೊಂಡು ನೇರ ದೇವಾಲಯವನ್ನು ಪ್ರವೇಶಿಸಿ, ಅಲ್ಲಿ 'ಆತ್ಮಾರಾಮ'ದ[೬] ಪೂಜೆಗೆ ಕುಳಿತುಕೊಂಡರು. ಬಿಳಿಯ ಚಂದ್ರಕಾಂತ ಶಿಲೆಯಲ್ಲಿ ನಿರ್ಮಿಸಿದ ಶ್ರೀರಾಮಕೃಷ್ಣರ ಪೀಠದ ಮೇಲೆ ಒಂದು ಸಣ್ಣ ಪೆಟ್ಟಿಗೆಯೊಳಗೆ ಇರುವ ಇದನ್ನು ಇಂದು ತೆರೆದಿಡಲಾಗಿದೆ. ಶ್ರೀಮಾತೆ ಆ ಪೆಟ್ಟಿಗೆಯೊಳಗಿಂದ ಆತ್ಮಾರಾಮವನ್ನು ಕೈಯಲ್ಲಿ ತೆಗೆದುಕೊಂಡು, ಭಾವಪೂರ್ಣವಾಗಿ ಪೂಜೆ ಮಾಡತೊಡಗಿದರು. ಅವರ ಎರಡೂ ಕಣ್ಣುಗಳಿಂದ ಒಂದೇ ಸಮನೆ ಬಾಷ್ಪಜಲ ಸುರಿಯತೊಡಗಿತು. ಕೈಗಳು ನಡುಗತೊಡಗಿದವು. ಬಹಳ ಹೊತ್ತು ಅವರು ಆತ್ಮಾರಾಮವನ್ನು ತಮ್ಮೆದೆಯಲ್ಲೇ ಇಟ್ಟುಕೊಂಡಿದ್ದರು.

ಶ್ರೀಮಾತೆ ಹೀಗೆ ತಮ್ಮಲ್ಲೇ ಭಾವಲೀನರಾದ ವಿಚಾರ ಮಠದಲ್ಲಿದ್ದವರ ನಡುವೆ ಮಿಂಚಿನಂತೆ ವೇಗವಾಗಿ ಹರಡಿತು. ಅದರಿಂದ ಎಲ್ಲರೂ ಆನಂದಗೊಂಡು, ತವಕದಿಂದ ಅಲ್ಲಿದ್ದ ಒಂದು ಮರದ ಕೆಳಗೆ ಒಟ್ಟುಸೇರಿ, ಖೋಲ್-ಕರತಾಳಗಳೊಂದಿಗೆ ಹಾಡುತ್ತ ನರ್ತಿಸತೊಡಗಿದರು.

ಎಲ್ಲರೂ ವರ್ತುಲಾಕಾರವಾಗಿ ಸುತ್ತುತ್ತ, ಹಾಡುತ್ತ ನರ್ತಿಸಿದರು, ಜೊತೆಗೆ ಖೋಲ್, ಕರತಾಳಗಳನ್ನು ಬಾರಿಸುತ್ತಿದ್ದರು. ಒಂದೇ ರೀತಿ ಲಯಬದ್ಧವಾಗಿ, ಭಾವಪೂರ್ಣವಾಗಿ ಎಲ್ಲರೂ ಮೈಮರೆತು ಹಾಡುತ್ತಿದ್ದರು:

**ತಂದೆಯೊಡನೆ ಆಡು ಬಾ, ತಾಯಿ ಮಡಿಲಿಗೆಳೆವಳು**
**ಬನ್ನಿರೆಲ್ಲ ಜೊತೆಗೆ ಬನ್ನಿ 'ಜೈ ಮಾ' ಎನ್ನಿರಿ !**
**ತಂದೆ ಮರುಳ ಶಿವನಾದರೆ, ತಾಯಿ ಮರುಳು ಹುಡುಗಿ,**
**ತಾಯಿಗೆಂಥ ಚೆಲುವು, ಬಣ್ಣ – ನೋಡು ಬಾರೊ ಇಲ್ಲಿ !**
**ಥೈ ಥೈ ಥೈ, ಬಾ, ಥೈಥೈ , ಹಾಡು, ನಲಿ, ಥೈ ಥೈ ಥೈ**
**ತಾಯಿ ದೊರಕಿದಳು ನಮಗೆ, ನಾವು ತಾಯ ಸುತರು !**

ಅಲ್ಲಿಯವರೆಗೆ ಸ್ವಾಮೀಜಿ ಮೇಲಂತಸ್ತಿನಲ್ಲಿದ್ದ ತಮ್ಮ ಕೋಣೆಯಲ್ಲಿದ್ದರು. ಹಾಡು, ನರ್ತನ ಕೇಳಿ ಅವರಿಗಿನ್ನು ಸುಮ್ಮನಿರಲಾಗಲಿಲ್ಲ. ಅವರು ಕೆಳಗಿಳಿದು ಬಂದು, ಉಳಿದವರೊಂದಿಗೆ ಸೇರಿಕೊಂಡರು. ಅವರನ್ನು ನೋಡಿ ಉಳಿದವರಿಗೆ ಅಸಾಧಾರಣ ಶಕ್ತಿ ಉಕ್ಕಿ ಬಂದಂತಾಯಿತು. ಎಲ್ಲರೂ ಮೈಮರೆತು, 'ತಂದೆಯೊಡನೆ ಆಡು ಬಾ, ತಾಯಿ ಮಡಿಲಿಗೆಳೆವಳು' ಎಂದು ಜೊತೆಗೆ ಸ್ವರ ಸೇರಿಸಿ ಹಾಡುತ್ತ ನರ್ತಿಸತೊಡಗಿದರು. ಸ್ವಾಮೀಜಿ ಎಲ್ಲರಿಗೂ ಉತ್ಸಾಹ ಬರಿಸುತ್ತ 'ಹಾಡು, ಹಾಡು' ಎನ್ನತೊಡಗಿದರು. ನರ್ತಿಸುತ್ತಿದ್ದವರಿಗೆ ಅವರು ಅಂಗ-ಭಂಗಿ ಮೂಲಕ ತೋರಿಸುತ್ತ ಪ್ರೋತ್ಸಾಹಿಸತೊಡಗಿದರು. ಈಗ ಸ್ವಾಮೀಜಿ ತಾವೇ ಖೋಲ್ ತೆಗೆದುಕೊಂಡು ಬಾರಿಸತೊಡಗಿದರು, ಮತ್ತೆ ಹಾಡುತ್ತ ನರ್ತಿಸತೊಡಗಿದರು. ಎಂಥ ಅಪೂರ್ವ ದೃಶ್ಯವದು! ಯಾರು ಅದನ್ನು ನೋಡುವರೋ ಅವರೇ ಧನ್ಯರು! ಬಹಳ ಹೊತ್ತು ಇದೇ ರೀತಿ ಹಾಡು, ನರ್ತನ ನಡೆದು ಬಳಿಕ ಖೋಲ್ ಧ್ವನಿ ನಿಂತಿತು. ಅದಕ್ಕನುಗುಣವಾಗಿ ಹಾಡೂ ನಿಂತಿತು. ನಿಧಾನವಾಗಿ ಎಲ್ಲರೂ ಒಂದೇ ಸ್ವರದಿಂದ ಹಾಡತೊಡಗಿದರು – 'ತಂದೆಯೊಡನೆ ಆಡು ಬಾ, ತಾಯಿ ಮಡಿಲಿಗೆಳೆವಳು ..'

ಸುಮಾರು ಒಂದೂವರೆ ಗಂಟೆ ಕಾಲ ಪೂಜೆ ಮಾಡಿದ ಶ್ರೀಮಾತೆ, ಕೊರಳ ಸುತ್ತ ಸೆರಗನ್ನು ಸುತ್ತಿ , ನೆಲಕ್ಕೆ ಹಣೆಯನ್ನು ಸ್ಪರ್ಶಿಸಿ ಪ್ರಣಾಮ ಮಾಡಿದರು. ನಡುಗುತ್ತಿದ್ದ ಕೈಗಳಿಂದ ಆತ್ಮಾರಾಮವನ್ನು ಪೆಟ್ಟಿಗೆಯ ಒಳಗಿಟ್ಟರು. ಅನಂತರ ಪೆಟ್ಟಿಗೆಯನ್ನು ಬೀಗ ಹಾಕಿ ಭದ್ರಪಡಿಸಲಾಯಿತು. [೭]

ಸಾಯಂಕಾಲ ಸೋದರಿ ನಿವೇದಿತಾ ಬಂದಳು. ಶ್ರೀಮಾತೆ ಆಗ ಬೋಸ್‌ಪಾರಾ ಲೇನ್‌ಗೆ ಬಂದರು. ಅವರ ದೋಣಿಯ ಜೊತೆಗೇ ಇನ್ನೊಂದು ದೋಣಿಯ ಮೂಲಕ ಸ್ವಾಮೀಜಿ, ರಾಖಾಲ್ ಮಹಾರಾಜ್ ಹಾಗೂ ಶರತ್ ಮಹಾರಾಜರನ್ನು ನಿವೇದಿತಾ ಕರೆದುಕೊಂಡು ಬಂದಳು. ಮೇಲೆ ಹೇಳಿದ ೧೬, ಬೋಸ್ ಪಾರಾ ಲೇನ್ ಮನೆಯಲ್ಲಿ ಅವರೆಲ್ಲರ ಸಾನ್ನಿಧ್ಯದಲ್ಲಿ 'ಬಾಲಿಕಾ ವಿದ್ಯಾಲಯ'ದ ಉದ್ಘಾಟನೆ ನಡೆಯಿತು.

ಕೆಲವು ದಿನಗಳ ನಂತರ ಯೋಗಿನ್ ಮಹಾರಾಜರ ಆರೋಗ್ಯ ಕೆಟ್ಟಿತು. ಕ್ರಮೇಣ ಆರೋಗ್ಯ ಇನ್ನಷ್ಟು ಹದಗೆಟ್ಟಿತು. ಅವರು ಎಂದಿನಂತೆ ಊಟ ಮಾಡುವುದನ್ನು ಬಿಟ್ಟರು. ಡಾಕ್ಟರ್ ಬಂದು ನೋಡಿದರು. ಪ್ರಸಿದ್ಧ ಡಾಕ್ಟರ್‌ಗಳಾದ ಡಾಕ್ಟರ್ ವಿಪಿನ ಬಿಹಾರಿ ಘೋಷ್ ಹಾಗೂ ಶಶಿಭೂಷಣ ಘೋಷ್ ಅವರೆಲ್ಲ ಬಂದು ರೋಗಿಯನ್ನು ನೋಡಿ, ರೋಗ ಅತಿಸಾರವೆಂದು ಪತ್ತೆಹಚ್ಚಿ, ಅದಕ್ಕೆ ಚಿಕಿತ್ಸೆ ಮಾಡತೊಡಗಿದರು. ಪ್ರಸಿದ್ಧ ಆಯುರ್ವೇದ ವೈದ್ಯರುಗಳೂ ಬರತೊಡಗಿದರು. ಯಾವುದರಿಂದಲೂ ಅವರಿಗೆ ವಾಸಿಯಾಗಲಿಲ್ಲ. ***(ಮುಂದುವರಿಯುವುದು)***

ಶ್ಯಾಮಾಪೂಜೆಯ ದಿನದಂದಲ್ಲ ; ಅದಕ್ಕಿಂತ ಹಿಂದಿನ ದಿನ. [೧೮೯೮ರ ನವೆಂಬರ್ ೧೨, ಶನಿವಾರದಂದು. ಅವರು ಹೊಸಮಠ (ಬೇಲೂರು ಮಠ) ದಲ್ಲಿ ಶ್ರೀರಾಮಕೃಷ್ಣರ ಪೂಜೆ ಇತ್ಯಾದಿ ಮಾಡಿದರು.] – *ಸಂ.*

೬ ಶ್ರೀರಾಮಕೃಷ್ಣರ ಸಮಾಧಿಯ ನಂತರ ಅವರ ಅಸ್ಥಿಯನ್ನು ಒಂದು ತಾಮ್ರದ ಪಾತ್ರೆಯಲ್ಲಿಟ್ಟು, ಅದನ್ನು ಬೇಲೂರು ಮಠದಲ್ಲಿದ್ದವರು ಪ್ರತಿದಿನ ಪೂಜೆ ಮಾಡುತ್ತಿದ್ದಾರೆ. ಈಗ ಈ ಪೆಟ್ಟಿಗೆಯನ್ನು ಶ್ರೀರಾಮಕೃಷ್ಣರ ವಿಗ್ರಹದ ಪೀಠದಲ್ಲೇ ಇಡಲಾಗಿದೆ. ಸ್ವಾಮೀಜಿ ಅದನ್ನು 'ಆತ್ಮಾರಾಮ'ವೆಂದು ಕರೆಯುತ್ತಿದ್ದರು.

೭ ಸ್ವಾಮಿ ಗಂಭೀರಾನಂದರು ಬರೆದ ಜೀವನ ಚರಿತ್ರೆಯ ಪ್ರಕಾರ ಇದು ಶ್ಯಾಮಾಪೂಜೆಯ ದಿನದಂದು (೧೮೯೮, ನವಂಬರ್ ೧೩.) ನಡೆಯಿತು. –*ಸಂ.*



# ರಾಮಕೃಷ್ಣ ಭಾವಮಂಜರಿ

ನಾರಾಯಣಿ ದಾಮೋದರ್

ಶ್ರೀರಾಮಕೃಷ್ಣರ ಜೀವನ ಹಾಗೂ ಉಪದೇಶಗಳು ಬದುಕಿಗೆ ನಿರಂತರ ಬೆಳಕನ್ನು ನೀಡುತ್ತವೆ; ಆದರೆ ಅವುಗಳನ್ನು ಗ್ರಹಿಸುವ ಹಾಗೂ ಸ್ವೀಕರಿಸುವ ಹೃದಯ ನಮಗಿರಬೇಕು. ಈ ವಿಷಯವನ್ನು ಕಾವ್ಯಾತ್ಮಕವಾಗಿ ವಿವರಿಸಿರುವ ಲೇಖಕಿ, ಮಂಗಳೂರು ಆಕಾಶವಾಣಿಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಅವರು ಎರಡು ಪೌರಾಣಿಕ ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ.

ದೇವದೇವತಾ ಭಾವತೀರ್ಥದ ಭದ್ರದಂಡೆಯ ಮೇಲೆ ನಿಂತಿರುವ ಭಾರತೀಯ ಪರಂಪರೆಯನ್ನು ಆಧರಿಸಿ ಆವರಿಸಿರುವ – ತ್ರೇತಾಯುಗದ ಶ್ರೀರಾಮ, ದ್ವಾಪರದ ಶ್ರೀಕೃಷ್ಣರ ಸಾಲಿನಲ್ಲಿ ವಿರಾಜಮಾನರಾಗಿರುವ – **ಕಲಿಯುಗದ ವಿಸ್ಮಯವೇ ಶ್ರೀರಾಮಕೃಷ್ಣರು.** ಮನಸ್ಸಿದ್ದರೂ ಕಠಿಣವೆನ್ನಿಸಿ ಅರ್ಥೈಸಿಕೊಳ್ಳಲಾಗದ ನಮ್ಮ ವೇದ, ಉಪನಿಷತ್ತು, ಪುರಾಣಗಳು ಎಲ್ಲರಿಗೂ ತಲುಪುವಂತೆ – ಅವುಗಳ ಸಾರವನ್ನು ಸರಳವಾಗಿ ಉಪದೇಶಿಸಿದ ಮಹಾನ್ ಚೇತನವೇ ಶ್ರೀ ರಾಮಕೃಷ್ಣ ಪರಮಹಂಸರು.

''ಜ್ಞಾನ, ಕರ್ಮ, ಭಕ್ತಿಯೋಗಗಳೆಲ್ಲವೂ ಬಿಡುಗಡೆಯ ಕಡೆ ಗೊಯ್ಯುವ ಸುದೀರ್ಘ ದಾರಿಗಳು; ವಿವೇಕಪೂರ್ಣರಾಗಿ, ಮಮಕಾರರಹಿತರಾಗಿ ಸಾಕ್ಷಿಯ ಅರಿವಿನಲ್ಲಿದ್ದರೆ ಯೋಗ ಸಾಧನೆಯ ಹಂಗಿಲ್ಲದೆ – ಈ ಕ್ಷಣವೇ ಬಿಡುಗಡೆ ಪಡೆಯಬಹುದು...'' ಎಂಬುದು – ಒಂದೇ ನೆಗೆತಕ್ಕೆ ಗುರಿ ತಲುಪಿಸುವ ಸನಾತನ ದರ್ಶನ. ಅಷ್ಟಾವಕ್ರನು ಜನಕನಿಗೆ ಬೋಧಿಸಿದ ಬೋಧನೆಯ ಸಾರವಿದು. ಸಾಂಖ್ಯಮತವೂ ಇದೇ. ಈ ದೇಹವು ನೀರು, ಬೆಂಕಿ, ಗಾಳಿ, ಭೂಮಿ, ಆಕಾಶಗಳಿಂದ ಆಗಿದ್ದರೂ ಇವು ಯಾವುವೂ ನಾವಲ್ಲ. ಈ ಪಂಚಭೂತಗಳ ದೀಪಸಾಕ್ಷಿಗಳಂತಿರುವ ದೇಹಿಗಳು ಅರಿವಿನ ***ಸಾಕ್ಷಿಯಾದಾಗಲೇ*** ನಿಜವಾದ ಬಿಡುಗಡೆ... ಅದೇ ಸಮಾಧಿ. ನಾನು ಭೂಮಿಯಲ್ಲ; ಗಾಳಿಯಲ್ಲ; ನೀರು, ಆಕಾಶವೂ ಅಲ್ಲ. ಬಿಡುಗಡೆ ಬೇಕಾದರೆ ನಿನಗೆ ನೀನೇ ಸಾಕ್ಷಿಯಾಗು...

ಇಂತಹ ಉಪದೇಶಗಳು ಪಾಮರರಿಗೆ ಕಬ್ಬಿಣದ ಕಡಲೆ ಅನ್ನಿಸುತ್ತವೆ. ನೀರಿಳಿಯದ ಗಂಟಲಿನಲ್ಲಿ ಕಡುಬನ್ನು ತುರುಕಿದಂತಹ ಫಜೀತಿಯನ್ನು ಒಡ್ಡುತ್ತವೆ. ಸಾಕ್ಷಿ ಎಂದರೇನು? ಅರಿವು ಎಂದರೇನು? ಬಿಡುಗಡೆ ಎಂದರೇನು? ಯಾವುದರಿಂದ ಬಿಡುಗಡೆ? ಇಂತಹ ನಿಗೂಢವೆನ್ನಿಸುವ ಆಧ್ಯಾತ್ಮಿಕ ರಹಸ್ಯಗಳನ್ನು ಪಾಮರರಿಗೂ ತಲುಪುವಂತೆ ಉಪದೇಶಿಸಿದ ಸಾಕ್ಷಾತ್ಅವತಾರಿಯೇ ಶ್ರೀರಾಮಕೃಷ್ಣರು.

ಶ್ರೀರಾಮಕೃಷ್ಣ ಪರಮಹಂಸರು ದೈವೀಶಕ್ತಿಯ ಪೂರ್ಣತ್ವವನ್ನು ಹಾರ್ದಿಕವಾಗಿ ಭಾವಿಸಿ, ಸ್ವತಃ ಅನುಭವಿಸಿ, ಸಾಕ್ಷಾತ್ಕಾರದವರೆಗೂ ಸಂಚರಿಸಿ, ತಮ್ಮ ಅರಿವನ್ನು ಸುಂದರ ಉಪಮೆಗಳೊಂದಿಗೆ ಶಾಬ್ದಿಕವಾಗಿಯೂ ಸಶಕ್ತವಾಗಿ ವಿವರಿಸಿದವರು. ಯಾವತ್ತೂ ಗಹನ ವಿಚಾರಗಳನ್ನು ಸರಳವಾಗಿ ಬೋಧಿಸುವುದು ಅತ್ಯಂತ ಕಠಿಣ. ಅಂತಹ ಯಾವುದೇ ಬೋಧನೆಯು ಗಾಢವಾದ ಪ್ರಭಾವವನ್ನು ಉಂಟುಮಾಡುವುದಾದರೆ ಅದೊಂದು ಮಹತ್ಸಾಧನೆ. ಆದ್ದರಿಂದಲೇ ಶ್ರೀರಾಮಕೃಷ್ಣರ ಸರಳ ಬೋಧನೆಗಳು ಸಾರ್ವಕಾಲಿಕ ದಾರಿದೀಪಗಳಾಗಿ ಉಳಿದುಹೋಗಿವೆ. ರಾಮಕೃಷ್ಣರಿಗೆ ಸ್ವತಃ ಶಿಕ್ಷಣದಲ್ಲಿ ಪದವಿ, ಪತ್ರಗಳಿಲ್ಲದಿದ್ದರೂ ಘನ ವಿದ್ವಾಂಸರೂ ಮರವಟ್ಟು ನಿಲ್ಲುವಂತಹ ಘನ ವಿಚಾರಗಳನ್ನು ನಡೆದು ನುಡಿದು – ರಾಮಕೃಷ್ಣ ಗುಂಜನದ ಸಾಕ್ಷಿಯಾಗಿ, ಲಕ್ಷಾಂತರ ಸಾಕ್ಷೀ ಗುಂಜನಗಳ ಸಾಕ್ಷ್ಯವೊದಗಿಸಿದವರು ಪರಮಹಂಸರು. ವೇದ, ಉಪನಿಷತ್ತುಗಳನ್ನು ನೇರವಾಗಿ ಪ್ರವೇಶಿಸಲಾಗದ ಪಾಮರರಿಗೂ ಶ್ರೀರಾಮಕೃಷ್ಣರ ಸಾರರೂಪೀ ಬೋಧನೆಗಳು ಸರಳ ಪ್ರವೇಶಿಕೆಗಳಂತಿವೆ; ಇಂದಿಗೂ ಕೈದೀವಿಗೆಯಾಗಿವೆ. ಇಂತಹ ಭೂಮ ವ್ಯಕ್ತಿತ್ವಗಳು– ಕೇವಲ ಅಧ್ಯಾತ್ಮವಾದಿಗಳು, **ಸಂನ್ಯಾಸಿಗಳು ಮತ್ತು ವಿದ್ವಾಂಸರಿಗೆ ಮಾತ್ರವಲ್ಲದೆ ಸಂಸಾರೀ ಗೃಹಸ್ಥರಿಗೆ ವಿಶೇಷವಾಗಿ ಅನುಕರಣೀಯರು; ಆದರ್ಶಪ್ರಾಯರು; ಪೂಜ್ಯರು.** ಆದ್ದರಿಂದಲೇ ಈ ಸಂಸಾರವು ರಾಮಕೃಷ್ಣರನ್ನು ಮನೆಯ ಸದಸ್ಯರನ್ನಾಗಿಸಿಕೊಂಡಿದೆ. ಸಾಂಸಾರಿಕ ಜಂಜಡಗಳು ಎದುರಾದಾಗ ದಿಕ್ಕುಗಾಣದೆ ಚಡಪಡಿಸುವವರಿಗೆ '**ಶ್ರೀರಾಮಕೃಷ್ಣ ವಚನವೇದ**'ದಲ್ಲಿ ಅನಿರ್ವಚನೀಯ ಸಾಂತ್ವನ ಸಿಗುತ್ತದೆ. ಲೋಕಶಿಕ್ಷಕನ ಬದುಕು ಮತ್ತು ಲೋಕಶಿಕ್ಷಣದ ಶೈಲಿಯ ಒಂದು ಪರಿಪೂರ್ಣ ಮಾದರಿಯೇ ಶ್ರೀರಾಮಕೃಷ್ಣ ಪರಮಹಂಸರು. ಉಪದೇಶಕನ ಆಚರಣೆಗಳೇ ಶಿಕ್ಷಣವಾಗಬೇಕು; ಆಗಲೇ ಯಾವುದೇ ಉಪದೇಶವು ಪರಿಣಾಮಕಾರಿಯಾಗಬಹುದು ಎಂಬುದಕ್ಕೆ ಶ್ರೀರಾಮಕೃಷ್ಣರೇ ಸಾಕ್ಷಿ.

ಇಂದು ಸರಳತೆಯನ್ನು ಆನಂದಿಸುವ ಶಕ್ತಿಯನ್ನು ಮನುಷ್ಯರು ಕಳೆದುಕೊಳ್ಳುತ್ತಿದ್ದಾರೆ. ಕೃತಕವಾದ ಬಾಹ್ಯ ವೇಷಗಳನ್ನೇ ಸತ್ಯವೆಂದು ಆರಾಧಿಸುವ ನಿತ್ಯದ ದೊಂಬರಾಟದ ಭ್ರಮಾರೋಗವು ಇಂದಿನ ಸಮಾಜವನ್ನು ಪೀಡಿಸುತ್ತಿದೆ. ಇಂತಹ ಮರೀಚಿಕೆಯ ಬೆನ್ನು ಹತ್ತಿದವರೆಲ್ಲರೂ ಕ್ರಮೇಣ ಮಾನಸಿಕ ಕ್ಷೋಭೆಗೊಳಗಾಗಿ ಅಶಾಂತಿಗೆ ತುತ್ತಾಗುತ್ತಿದ್ದಾರೆ. ಯಾವುದೇ ತೋರಿಕೆಯ ಆಡಂಬರಗಳೂ ಜೀವಕ್ಕೆ ತೃಪ್ತಿ, ನೆಮ್ಮದಿಯನ್ನು ಕೊಡಲಾರವು.

ಜಗವೇ ನಾಟಕರಂಗ ಎಂದಾಗ ಯಾವುದೇ ಬದುಕನ್ನು ಕೃತಕ – ಜಟಿಲಗೊಳಿಸಿಕೊಳ್ಳಬೇಕೆಂದು ಅರ್ಥವಲ್ಲ. ನಟನೆಯು ಸಹಜವಾಗಿರಬಾರದೆಂದೂ ಅರ್ಥವಲ್ಲ. ನಟನೆಯು ಸಹಜವಾದಷ್ಟೂ ಪಾತ್ರಗಳು ಶೋಭಿಸುತ್ತವೆ. ಆದರೆ **ಸಹಜ ಸರಳವಾಗಿರುವುದು ಸುಲಭವಲ್ಲ. ಸರಳತೆಯು ತ್ಯಾಗವನ್ನು ಸತ್ಯವನ್ನು ಅಪೇಕ್ಷಿಸುತ್ತದೆ.** ಸಹಜತೆಯು ನಿರ್ಭಯತೆಯನ್ನು ಅಪೇಕ್ಷಿಸುತ್ತದೆ. ಯಾವುದೇ

ಭೂಮತೆಯು ಸರಳ-ಸಹಜವಾಗಿದ್ದರೆ – ಮೊದಲಿಗೆ ವಿಸ್ಮಯ ಗೊಳಿಸುತ್ತದೆ; ಕ್ರಮೇಣ ಆಕರ್ಷಿಸುತ್ತದೆ; ತನ್ನ ಸರಳತೆಯಿಂದಲೇ ಎಲ್ಲರನ್ನೂ ಸೆಳೆದುಕೊಳ್ಳುತ್ತದೆ !

**ಕನ್ನಡಿಯ ಮೇಲೆ ಧೂಳು ಕವಿದಿದ್ದರೆ ಮುಖ ಕಾಣಿಸದು. ಚಿತ್ತಶುದ್ಧವಿಲ್ಲದಿದ್ದರೆ ಸ್ವಸ್ವರೂಪದ ದರ್ಶನವು ದೊರೆಯದು.** ನೋಡಿ, ಎಲ್ಲಿ ಅವತಾರಪುರುಷರು ಜನ್ಮವೆತ್ತುವರೋ ಅಲ್ಲಿ ಸರಳತೆಯು ನಲಿಯುತ್ತದೆ. ನಂದ, ದಶರಥ, ವಸುದೇವ – ಇವರೆಲ್ಲರೂ ಸರಳಜೀವಿಗಳೇ ಆಗಿದ್ದರು... ಚಿತ್ತ ಶುದ್ಧವಿಲ್ಲದಲ್ಲಿ ಶುದ್ಧ ಇಚ್ಛೆಯೇ ಬರುವುದಿಲ್ಲ... ಜನ್ಮಜನ್ಮಾಂತರದ ತಪಸ್ಸಿಲ್ಲದೆ ಸರಳತೆ ಉದಾರತೆಗಳು ಉಂಟಾಗುವುದಿಲ್ಲ... **ಮಣ್ಣನ್ನು ಚೆನ್ನಾಗಿ ಹದ ಮಾಡಿಕೊಂಡಲ್ಲದೆ ಮಡಿಕೆ ಕುಡಿಕೆಗಳನ್ನು ಮಾಡಲಾಗುವುದಿಲ್ಲ. ಮಣ್ಣಿನೊಳಗೆ ಮರಳು, ಕಲ್ಲು ಸೇರಿಕೊಂಡಿದ್ದರೆ ಮಡಕೆಯು ಬಿರುಕು ಬಿಡುತ್ತದೆ.** ಶ್ರಮವೆಲ್ಲವೂ ವ್ಯರ್ಥವಾಗುತ್ತದೆ. ಆದ್ದರಿಂದಲೇ ಕುಂಬಾರರು ಮಡಕೆಯನ್ನು ಮಾಡುವ ಮೊದಲು ಮಣ್ಣನ್ನು ಹದಗೊಳಿಸಿಕೊಳ್ಳುತ್ತಾರೆ. ಅಂತೆಯೇ ಉದಾರತೆ, ಸರಳತೆಗಳಿಂದ ಹದಗೊಳಿಸಿಕೊಂಡ ಅಂತರಂಗದಲ್ಲಿ ಮಾತ್ರ ಅರಿವಿನ ಬಿಂಬವು – ಸತ್ಯದ ಬೆಳಕು ಮೂಡಬಲ್ಲದು. ಅದಿಲ್ಲದೆ ಹೋದರೆ ಬದುಕು ಎಂಬುದು ಧೂಳು ಕವಿದ ಕನ್ನಡಿಯಂತೆ; ಬಿರುಕು ಮೂಡಿದ ಮಡಕೆಯಂತೆ. ಎಲ್ಲವೂ ಅಯೋಮಯ; ವ್ಯರ್ಥ. ಹೀಗೆ ಶ್ರೀರಾಮಕೃಷ್ಣರು ನೀಡಿದ್ದ ದೃಷ್ಟಾಂತಗಳೆಲ್ಲವೂ ನಿತ್ಯ ಬದುಕಿಗೆ ಹತ್ತಿರವಾಗಿವೆ. ಲೋಕವೆಂಬ ಕಬ್ಬಿನದ ಅಂಗಡಿಯ ಸರಕುಗಳಾದ ಮನುಷ್ಯಜೀವಿಗಳು ಶ್ರದ್ಧೆ ಭಕ್ತಿ ವೈರಾಗ್ಯಗಳಿಂದ ತಮ್ಮ ಅಂತರಂಗಕ್ಕೆ ದಿನವೂ ಹಿಡಿಯುವ ತುಕ್ಕನ್ನು ನಿವಾರಿಸಿಕೊಂಡು ಸರಳಗೊಳ್ಳಲು ರಾಮಕೃಷ್ಣರ ವಚನಸುಧೆಯೇ ದಿವ್ಯೌಷಧ. ಶ್ರೀ ರಾಮಕೃಷ್ಣರು ಅಂತಹ ಲೋಹ ಶುದ್ಧಕ ! ಲೋಹಚುಂಬಕ !

**ಸ್ವಲ್ಪ ಗೀತೆ, ಸ್ವಲ್ಪ ಭಾಗವತ, ಸ್ವಲ್ಪ ವೇದಾಂತ ಓದಿದ ಜನರು ತಾವು ಎಲ್ಲವನ್ನೂ ಅರೆದು ಕುಡಿದು ಬಿಟ್ಟಿದ್ದೇವೆ ಎಂದು ಭಾವಿಸುತ್ತಾರೆ.** ಸಕ್ಕರೆ ಗುಡ್ಡಕ್ಕೆ ಒಂದು ಇರುವೆ ಹೋಯಿತು. ಒಂದು ಕಣ ಸಕ್ಕರೆಯನ್ನು ತಿನ್ನುವುದರಲ್ಲಿಯೇ ಅದರ ಹೊಟ್ಟೆ ತುಂಬಿ ಹೋಯಿತು. ಇನ್ನೊಂದು ಕಣ ಸಕ್ಕರೆಯನ್ನು ಬಾಯಿಯಲ್ಲಿ ಕಚ್ಚಿಕೊಂಡು ಇರುವೆಯು ತನ್ನ ಗೂಡಿಗೆ ಹಿಂದಿರುಗುತ್ತಿತ್ತು. ಹಿಂದಿರುಗುವಾಗ ತನ್ನ ಮನಸ್ಸಿನಲ್ಲಿ, 'ಮುಂದಿನ ಸಲ ಬಂದು ಇಡೀ ಗುಡ್ಡವನ್ನೇ ಗೂಡಿಗೆ ಸಾಗಿಸಿ ಬಿಡುತ್ತೇನೆ!' ಎಂದು ಯೋಚಿಸಿತು... ಶ್ರೀರಾಮಕೃಷ್ಣರು ತಮ್ಮ ಭಕ್ತರೊಂದಿಗೆ ಸಂಭಾಷಿಸುತ್ತ ಆಡಿದ್ದ ಮಾತಿದು. ಅಜ್ಞರೆಲ್ಲರೂ ತಮ್ಮನ್ನು ತಾವೇ ಪ್ರಾಜ್ಞರೆಂದುಕೊಂಡು ಭುಸುಗುಡುತ್ತಿರುವ ಇಂದಿನ ಸನ್ನಿವೇಶದಲ್ಲಿ ರಾಮಕೃಷ್ಣರು ನೀಡಿದ ಇರುವೆಯ ಈ ದೃಷ್ಟಾಂತವು ಮನನೀಯವಾಗಿದೆ. **ನಿಜವಾದ ಜ್ಞಾನವು ಯಾವತ್ತೂ ಮೌನವಾಗುತ್ತದೆ; ವಿನಮ್ರವಾಗುತ್ತದೆ. ಕಿವಿದೆರೆದು ಕೇಳಿಸಿಕೊಳ್ಳುತ್ತದೆ; ಮಥಿಸುತ್ತದೆ; ಅನುಭವಿಸುತ್ತದೆ; ಅಂತರ್ಮುಖಿಯಾಗುತ್ತದೆ...**

ವೇದಕಾಲದಲ್ಲಿ ಭರದ್ವಾಜ ಎಂಬ ಒಬ್ಬ ಋಷಿಯಿದ್ದರು. ಇವರು ಬೃಹಸ್ಪತಿಯಿಂದ ತಾರೆಯಲ್ಲಿ ಜನಿಸಿದ– ಶಂಯು– ಎಂಬ ಅಗ್ನಿಯ ಮಗ. ಪುರಾಣಕಾಲದಲ್ಲಿ ಮಹಾಭಾರತದವರೆಗೂ ಭರದ್ವಾಜರ ಪ್ರಸ್ತಾಪವಿದ್ದರೂ ಈಗ ಪ್ರಸ್ತಾಪಿಸುತ್ತಿರುವ ಭರದ್ವಾಜರು ವೇದಕಾಲದವರು. ಇವರು ಬಹು ದೀರ್ಘಕಾಲ ಗುರುಕುಲದಲ್ಲಿದ್ದು ಶ್ರದ್ಧೆ ನಿಷ್ಠೆಯಿಂದ ವೇದಾಭ್ಯಾಸ ನಡೆಸಿದ್ದರು. ಅಂದೂ – ಪ್ರತಿಯೊಂದು ವಿದ್ಯೆಯ ಅಭ್ಯಾಸಕ್ಕೂ ನಿಗದಿತ ಅವಧಿಯಿರುತ್ತಿತ್ತು. ಒಮ್ಮೊಮ್ಮೆ ಗುರುಗಳು ತಮ್ಮ ಭಂಡಾರವು ಖಾಲಿಯಾದ ಮೇಲೆ ಶಿಷ್ಯರನ್ನು ಬಿಡುಗಡೆ ಮಾಡಿಬಿಡುವುದೂ ಇತ್ತು. ಒಮ್ಮೊಮ್ಮೆ ವಿದ್ಯೆಯ ತಾಪವನ್ನು ಸಹಿಸಲಾಗದ ಕೆಲವು ಶಿಕ್ಷಾರ್ಥಿಗಳು ತಾವಾಗಿಯೇ ಗುರುಕುಲದಿಂದ ಬಿಡುಗಡೆ ಹೊಂದುವುದೂ ಇತ್ತು.

ಆದರೆ ಭರದ್ವಾಜರು ಬಹು ದೀರ್ಘಕಾಲ ಅಧ್ಯಯನ ನಡೆಸಿದರು; ಸ್ವಾಧ್ಯಾಯವನ್ನೂ ನಡೆಸಿದ್ದರು. ಹೀಗಿದ್ದೂ ಅವರ ಜ್ಞಾನದಾಹವು ತಣಿಯಲೇ ಇಲ್ಲ; ಪೂರ್ಣತೆಯ ತೃಪ್ತಿಯೂ ಸಿಗಲಿಲ್ಲ. ವೇದಾಭ್ಯಾಸವು ನಿರಂತರವಾಗಿ ನಡೆಯುತ್ತಲೇ ಇತ್ತು. ತಿಳಿದಷ್ಟೂ ಇನ್ನೂ ಉಳಿದಿದೆ ಎಂಬ ಭಾವವೇ ಭರದ್ವಾಜರನ್ನು ಆವರಿಸುತ್ತಿತ್ತು. **'ಒಂದೇ ಬ್ರಹ್ಮವು ವಿಶ್ವವನ್ನು ವ್ಯಾಪಿಸಿದೆ'** ಎಂಬ ಅಧ್ಯಾತ್ಮ ತತ್ತ್ವದ ಹಿಂದೆ ಭರದ್ವಾಜರು ಸಂಚರಿಸತೊಡಗಿದ್ದರು. ಭರದ್ವಾಜರಿಗೆ ಬ್ರಹ್ಮ ದರ್ಶನದ ರವಷ್ಟು ರುಚಿ ಸಿಕ್ಕಿದೊಡನೆಯೇ ಅವರು ಬ್ರಹ್ಮಜ್ಞಾನದ ಆಳಕ್ಕೆ ಇಳಿಯತೊಡಗಿದ್ದರು. ಸ್ತೋತ್ರ, ಉಪಾಸನೆ, ಯಜ್ಞ, ಧ್ಯಾನ, ಚಿಂತನೆ, ನಿರಂತರ ಅಧ್ಯಯನಗಳ ನಂತರವೂ ಭರದ್ವಾಜರಿಗೆ ವೇದದ ಪೂರ್ಣ ಸಾಕ್ಷಾತ್ಕಾರವಾಗಲಿಲ್ಲ. ವೇದವು ತನ್ನ ಕೈಹಿಡಿಯಿತು – ಅನ್ನಿಸಲೇ ಇಲ್ಲ. ಅರಿವನ್ನು ಅರಸುವ ಪಯಣಕ್ಕೆ ಅಂತ್ಯವಿದೆಯೆ? ಭರದ್ವಾಜರೂ ಇಂತಹುದೇ ಕಠಿಣ ಹಾದಿಯಲ್ಲಿ ಮುನ್ನಡೆಯುತ್ತಿದ್ದರು. ಹೀಗೆ ಒಂದೇ ಸಮನೆ ೩೦೦ ವರ್ಷಗಳು ಕಳೆದು ಹೋದವು. ಭರದ್ವಾಜರ ಮುಗಿಯದ ವೇದಾಭ್ಯಾಸವು ನಡೆಯುತ್ತಲೇ ಇತ್ತು.

ಹೀಗಿರುವಾಗ ಭರದ್ವಾಜರ ಆಯುಷ್ಯವು ತೀರುತ್ತ ಬಂತು. ಅವರು ಹಣ್ಣು ಹಣ್ಣು ಮುದುಕರಾಗಿದ್ದರು. ಅವರ ಬಾಲ್ಯ – ಯೌವನವು ಉರುಳಿ ಹೊರಳಿ ವೃದ್ಧಾಪ್ಯವು ಆವರಿಸಿದ್ದೂ ಅವರಿಗೆ ತಿಳಿಯಲಿಲ್ಲ. ಭರದ್ವಾಜರು ಮುದುಕರಾಗಿ ಹೋಗಿದ್ದರು! ವೇದದ ಬೆನ್ನು ಬಿದ್ದಿದ್ದ ಅವರು ಬ್ರಹ್ಮಚರ್ಯಾಶ್ರಮದಿಂದ ಮುಂದೆ ಹೆಜ್ಜೆಯನ್ನೇ ಇಟ್ಟಿರಲಿಲ್ಲ. ಏಕಗಮ್ಯದ, ಜ್ಞಾನಯೋಗದ ಉಪಾಸನೆಯಲ್ಲಿ – ಜ್ಞಾನಪಾನ ರೋಮಾಂಚನದ ಮೈಮರೆವಿನಲ್ಲಿಯೇ ಭರದ್ವಾಜರು ಮುದುಕರಾಗಿಬಿಟ್ಟಿದ್ದರು !

ಹೀಗಿರುವಾಗ, ಸುದೀರ್ಘಕಾಲ ವೇದಸಂಸಾರ ನಡೆಸಿದ ಭರದ್ವಾಜರ ಸ್ಥಿತಿಯನ್ನು ದೇವೇಂದ್ರನೂ ಗಮನಿಸುತ್ತಿದ್ದ. ಒಂದು ದಿನ ಜ್ಞಾನಪಿಪಾಸು ಭರದ್ವಾಜರನ್ನು – ಕುತೂಹಲ, ಆಶ್ಚರ್ಯ, ಮೆಚ್ಚುಗೆಗಳ ಸಮ್ಮಿಶ್ರ ಭಾವದಿಂದಲೇ ದೇವೇಂದ್ರನು ಮಾತನಾಡಿಸುತ್ತಾನೆ... ''ಭರದ್ವಾಜ ಮುನಿಗಳೇ, ನಿಮಗೆ ಇನ್ನೂ ನೂರು ವರ್ಷ ಆಯುಸ್ಸನ್ನು ದೇವತೆಗಳು ಅನುಗ್ರಹಿಸಿದರೆ ತಾವು ಏನು ಮಾಡುತ್ತೀರಿ..?''

''ದೇವೇಂದ್ರಾ, ನಾನು ವೇದಮಾತೆಯ ಪರಿಚಾರಕ. ಜ್ಞಾನಾರ್ಜನೆಯೇ ನನ್ನ ಉಸಿರು; ಗುರಿ. ಈಗ ಒಂದಷ್ಟು ಅಧ್ಯಯನ ನಡೆಸಿದ್ದರೂ ಇನ್ನೂ ಬಹಳಷ್ಟು ಅಧ್ಯಯನವು ಉಳಿದುಕೊಂಡಿದೆ...

ಆಯುಷ್ಯ ದೊರೆತರೆ ನಾನು ವೇದಾಧ್ಯಯನವನ್ನು ಮುಂದು ವರಿಸುತ್ತೇನೆ...'' ಎಂದರು ಭರದ್ವಾಜರು.

ಆಗ ಇಂದ್ರನು ಭರದ್ವಾಜರಿಗೆ ನಾಲ್ಕು ಪರ್ವತಗಳನ್ನು ತೋರಿಸುತ್ತಾನೆ. ''ಮುನಿಶ್ರೇಷ್ಠರೇ ನೋಡಿ... ಇವು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ – ಎಂಬ ನಾಲ್ಕು ಜ್ಞಾನಪರ್ವತಗಳು.'' ಎನ್ನುತ್ತ, ಆ ನಾಲ್ಕೂ ಪರ್ವತಗಳಿಂದ ಒಂದೊಂದು ಮುಷ್ಟಿಯಷ್ಟನ್ನು ತೆಗೆದುಕೊಂಡು ಬಂದು ತೋರಿ ಸುತ್ತ... ''ಇಲ್ಲಿ ನೋಡಿ... ನಾಲ್ಕು ಮುಷ್ಟಿ ಜ್ಞಾನ... ನೀವು ಈ ಮುನ್ನೂರು ವರ್ಷಗಳ ಅವಧಿಯಲ್ಲಿ ಅರಿತುಕೊಂಡದ್ದು ಈ ನಾಲ್ಕು ಮುಷ್ಟಿಯಷ್ಟು ಮಾತ್ರ. ಅಲ್ಲಿರುವ ಪರ್ವತದಷ್ಟು ಭಾಗದ ವೇದಾಧ್ಯಯನವು ಇನ್ನೂ ಉಳಿದುಕೊಂಡಿದೆ. ನೀವು ಜೀರ್ಣಿಸಿ ಕೊಂಡದ್ದು ಇರುವೆಯಷ್ಟು. ಅಧ್ಯಯನ ಮಾಡದೆ ಉಳಿದಿರುವ ವೇದಶರ್ಕರದ ಗುಡ್ಡವು ಬೃಹತ್ತಾಗಿ ನಿಂತಿದೆ. ನಾನು ಇನ್ನೊಂದು ನೂರು ವರ್ಷ ಆಯುಷ್ಯವನ್ನು ಕೊಟ್ಟರೂ – ನಿಮ್ಮೆದುರಿಗಿರುವ ಈ ಇಡೀ ಗುಡ್ಡವನ್ನು ನೀವು ಅರೆದು ಕುಡಿಯಬಲ್ಲಿರೆ? ನಿಮ್ಮ ಅಧ್ಯಯನವು ಮುಗಿದೀತೆ?''

ದೇವೇಂದ್ರನ ಮಾತುಗಳನ್ನು ಕೇಳುತ್ತಿದ್ದ ಭರದ್ವಾಜರು ದಿಙ್ಮೂಢ ರಾಗಿ ನಿಂತಿದ್ದರು. ''ಆಯುಷ್ಯದ ಮಿತಿಯುಳ್ಳ ಯಾವುದೇ ಬದು ಕಿನ ಸಾಧನೆಗಳಿಗೂ ಇತಿಮಿತಿ ಇರಲೇಬೇಕಲ್ಲವೆ?'' ಹೀಗೆ ಯೋಚಿ ಸುತ್ತ ಮೌನವಾಗಿದ್ದ ಭರದ್ವಾಜರನ್ನು ದೇವೇಂದ್ರನೇ ಸಂತೈಸು ತ್ತಾನೆ. ''ಸಾಕು ಭರದ್ವಾಜರೇ. ಈ ಜನ್ಮಕ್ಕೆ ಇಷ್ಟು ಸಾಕು. ಈಗ ಅರಿತಿರುವುದರಲ್ಲಿಯೇ ತೃಪ್ತರಾಗಿ. ಸಾಮಾನ್ಯ ಬದುಕಿನತ್ತ ಹೊರಳಿಕೊಳ್ಳಿ...''

ಇಂದ್ರನ ಸೂಚನೆಯಲ್ಲಿದ್ದ ವಾಸ್ತವವನ್ನು ಅರಿತ ಭರದ್ವಾಜರು – ಅನಂತರ ವೀರಾ ಎಂಬಾಕೆಯನ್ನು ವಿವಾಹವಾಗಿ, ವೀರ ಎಂಬ ಪುತ್ರನನ್ನೂ ಪಡೆದು, ಗೃಹಸ್ಥ ಜೀವನವನ್ನು ನಡೆಸುತ್ತ, ಜ್ಞಾನ ಪ್ರಸಾರದಲ್ಲಿಯೂ ತೊಡಗಿಕೊಂಡು ತಮ್ಮ ಶೇಷಾಯುಷ್ಯವನ್ನು ಕಳೆದರು. ಇದು ವೇದಕಾಲದ ಒಂದು ಕಥೆ.

ನಮ್ಮ ವೈದಿಕ ಋಷಿಮುನಿಗಳು ಮೂಗು ಹಿಡಿದು ಕುಳಿತ ಶುಷ್ಕ ಸಂನ್ಯಾಸಿಗಳಲ್ಲ; ಬ್ರಹ್ಮಾಂಡವನ್ನೇ ಮನೆ ಎಂದು ತಿಳಿದು ಬದುಕನ್ನು ಯಜ್ಞ ಎಂದು ಆದರಿಸಿ, ಸಮಷ್ಟಿಯನ್ನು ಇಡಿಯಾಗಿ ಪ್ರೀತಿಸಿ ಗೌರವಿಸಿದವರು. ಧರ್ಮ, ಅರ್ಥ, ಕಾಮ, ಮೋಕ್ಷವನ್ನು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸಾಶ್ರಮಗಳಲ್ಲಿ ತೊಡಗಿಸಿಕೊಂಡು, ಆಯಾ ಆಶ್ರಮ ಧರ್ಮದ ಮೂಲಕವೇ ವಿಧೇಯವಾಗಿ ಸಂಯಮದಿಂದ ಅನುಸರಿಸಿದವರು. ಸಹಜತೆ ಮತ್ತು ಸರಳತೆಯಲ್ಲಿ ಪ್ರಕೃತಿ–ಸತ್ಯವನ್ನು ಕಂಡವರು. ಸುತ್ತ ಚೆಲ್ಲಿ ರುವ ಆನಂದಾನುಭೂತಿಯನ್ನು ಪ್ರಸನ್ನ ಚಿತ್ತದಿಂದ ಸಜ್ಜನಿಕೆ ಯಿಂದ ಉಂಡವರು; ಉಣ್ಣಿಸಿದವರು.

ಇದು ವೇದದ ಪ್ರತಿಫಲ. ವೇದತತ್ತ್ವವು ಅರಿವಾದಾಗ ಎಲ್ಲೆಲ್ಲೂ ಪ್ರೇಮವೇ ಕಾಣುತ್ತದೆ. ನಾವು ಒರಗಿಕೊಂಡ ಅರಗಿಸಿ ಕೊಂಡ ಜ್ಞಾನವೇ ನಮ್ಮ ಕೈಹಿಡಿದು ನಡೆಸುತ್ತದೆ. ಮನುಷ್ಯ ಮನು ಷ್ಯರ ನಡುವೆ ಅಡ್ಡಗೋಡೆಗಳು ಏಳುವುದಕ್ಕಿಂತ ಎಷ್ಟೋ ಸಹಸ್ರ ವರ್ಷಗಳ ಹಿಂದೆ, ಜೀವಸಂಕುಲವೆಲ್ಲವೂ ಪರಸ್ಪರ ಸೌಹಾರ್ದ ದಿಂದ ಬದುಕಿದ್ದು ಅಂದಿನ ವಾಸ್ತವ.

**ವೇದ ಎಂದರೆ ಜ್ಞಾನ. ಅದು – ಅರ್ಥ ಮತ್ತು ಕಾಮದ ಸುತ್ತಲೂ ಪ್ರದಕ್ಷಿಣೆ ಹಾಕುವಂತಹ – ಇಂದು ನಾವು ಕಾಣುವ ಶಿಕ್ಷಣವಲ್ಲ.** ಅದು ಶುದ್ಧ ಜ್ಞಾನ; ಯಾವುದೇ ಅಂಟುನಂಟಿಲ್ಲದ ದಿಗಂಬರ. ಶುದ್ಧ ಜ್ಞಾನವು ಬೇಕಿದ್ದರೆ – ಅಂತಹ ಬೆಳಕಿನ ಬಯಲು ಕಾಣುವ ಹಂಬಲದಲ್ಲಿ ಬತ್ತಲಾಗಬೇಕು; ಬತ್ತದ ದಿಗಂಬರವಾಗ ಬೇಕು. ಲೋಕಶಿಕ್ಷಣ ನೀಡುವವರು ಸ್ವತಃ ದಿಗಂಬರ ಸದೃಶರಾಗಿರ ಬೇಕು. ಶುಕ, ನಾರದ, ಜನಕರಂತಾಗಬೇಕು. ಇದನ್ನೇ ಶ್ರೀ ರಾಮ ಕೃಷ್ಣರು ಹಲವಾರು ದೃಷ್ಟಾಂತಗಳ ಮೂಲಕ ವಿವರಿಸಿದ್ದಾರೆ.

ಯಾವುದನ್ನೂ ಖಂಡಿಸಬಾರದು. ಈ ಸೃಷ್ಟಿಯಲ್ಲಿರುವ ಎಲ್ಲವೂ ಭಗವಂತನ ವಿಭಿನ್ನ ರೂಪಗಳು. ಸಾಕಾರ ನಿರಾಕಾರದ ಗೊಂದಲವು ಅನಾವಶ್ಯಕ. ತಂತ್ರ ಮಂತ್ರಗಳೆಲ್ಲವೂ ವಿಭಿನ್ನ ದಾರಿ ಗಳು. ಆದರೆ ಗಮ್ಯವು ಒಂದೇ. ವಸ್ತು ಮಾತ್ರ ಒಂದೇ. ಅಭೇದ ಸ್ವರೂಪ. ಈ ಸೃಷ್ಟಿಯಲ್ಲಿರುವ ಎಲ್ಲ ವಸ್ತುಗಳೂ ಚೈತನ್ಯಮಯ. ಚಿಕ್ಕಮಗುವು ಅದನ್ನು ಸಹಜವಾಗಿ ಅನುಭವಿಸಬಲ್ಲದು. ಮುಗಿ ಲಿನ ಆರ್ಭಟ, ಗುಡುಗು ಮಿಂಚನ್ನು ಕಂಡಾಗ ''ಅಲ್ಲಿ ಯಾರೋ ಬೆಂಕಿಕಡ್ಡಿ ಗೀಚಿ ಹೋದ...'' ಎನ್ನುವ ಮಗುವಿನ ಪ್ರತಿಕ್ರಿಯೆ ಯನ್ನು – ಸರಳತೆಯನ್ನು ಕಳೆದುಕೊಂಡ ಹಿರಿಯರು ಬಾಲಿಶ ವೆನ್ನಬಹುದು. ಬಾಲ್ಯದಲ್ಲಿ ಚಿಟ್ಟೆ ಹಿಡಿಯುವ ಆಟದಲ್ಲಿ ಮುಳು ಗಿದ ಬಾಲಕರು ಎಲೆಗಳೊಂದಿಗೆ, ಚಿಟ್ಟೆಗಳೊಂದಿಗೂ ಸಂಭಾಷಿಸು ತ್ತಾರೆ. ''ಅಲುಗಬೇಡ; ನಾನು ಚಿಟ್ಟೆ ಹಿಡಿಯುತ್ತಿದ್ದೇನೆ; ಓಡ ಬೇಡ; ಹಾರಬೇಡ...'' ಎನ್ನುತ್ತ ಮಕ್ಕಳು ಸೃಷ್ಟಿಯೊಂದಿಗೆ ಸಂಭಾ ಷಿಸುವುದಿಲ್ಲವೆ? ಏಕೆಂದರೆ ಮಕ್ಕಳಿಗೆ ಪ್ರಕೃತಿಯು ಚೈತನ್ಯಮಯ ವಾಗಿ ಕಾಣುತ್ತದೆ. ಇದೇ ಅಧ್ಯಾತ್ಮಭಾವ. ಇಂತಹ ಸರಳ ವಿಶ್ವಾಸ, ಮುಗ್ಧ ವಿಶ್ವಾಸಗಳು ಇಲ್ಲದಿದ್ದರೆ ಭಗವಂತನ ಅನುಭವ ಆಗುವು ದಿಲ್ಲ. ಇದೇ ಚಿತ್ತಶುದ್ಧಿ.

**ಆಧುನಿಕ ವಿಜ್ಞಾನವು ಎಲ್ಲಿ ನಿಲ್ಲುತ್ತದೋ ಅಲ್ಲಿಂದಲೇ ಅಧ್ಯಾ ತ್ಮವು ಆರಂಭವಾಗುವುದು.** ಆದ್ದರಿಂದಲೇ ಕುತರ್ಕ ಬೇಡ; ಸಂಶ ಯವು ಒಳ್ಳೆಯದಲ್ಲ. ಸತ್ಯವನ್ನು ಅರಿಯುವ ಹಂಬಲವಿರಲಿ; ಮುಗ್ಧತೆಯೂ ಇರಲಿ. ಕೃತಕ ಡಂಭಾಚಾರಗಳು ಮನುಷ್ಯನ ಹಾದಿಯ ಮುಳ್ಳುಗಳು ಎಂಬ ಎಚ್ಚರವಿರಲಿ. ಪ್ರಸ್ತುತದ ಭಂಡ ಜಗತ್ತಿನಿಂದ ಪಾರಾಗಲು – ದೊಡ್ಡ ಸುಳ್ಳುಗಳ ರಾಶಿಯ ನಡುವಿ ನಲ್ಲಿರುವ ಗುಲಗಂಜಿಯಷ್ಟು ಸತ್ಯವನ್ನು ಆಯ್ದುಕೊಳ್ಳಲು ಮನೋ ವಾಕ್ಕಾಯಗಳನ್ನು ಪಳಗಿಸಿಕೊಳ್ಳಿ. ವಿಶ್ವಾಸದ ಭದ್ರನೆಲೆಯಲ್ಲಿ ನಿಂತ ಲ್ಲದೆ ಸತ್ಯದ ಶೋಧನೆಯು ಅಸಾಧ್ಯ – ಎಂದು ಸಾರಿ ಸಾರಿ ಹೇಳಿದ ಶ್ರೀರಾಮಕೃಷ್ಣರು ಶತಮಾನದಷ್ಟು ಹಿಂದೆ ನಮ್ಮ ಜೊತೆ ಯಲ್ಲಿಯೇ ಬದುಕಿದ್ದರು! ಸಂಸಾರದಲ್ಲಿದ್ದುಕೊಂಡೇ ಋಷಿ ಜೀವನ ನಡೆಸಲು ಸಾಧ್ಯವಿದೆ ಎಂಬುದನ್ನೂ ಆಚರಿಸಿ ತೋರಿ ದವರು – ಶ್ರೀ ರಾಮಕೃಷ್ಣರು. ಆದ್ದರಿಂದಲೇ ಸಂಸಾರಿಗಳಿಗೆ – ಗತಿ ಮತಿ ಸ್ವಾಮಿಯಾಗಿ ಸರ್ವದಾ ವಿರಾಜಮಾನರಾಗಿದ್ದಾರೆ.



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೩



ಮುಕ್ತಿಯೆಡೆಗೆ ಸೆಳೆತವಿದ್ದು ಸಂಸಾರವನ್ನು ಅತಿಕ್ರಮಿಸಿದರೂ ಸಹ ಮಾನವನು ಸ್ವಲ್ಪವಾದರೂ ಅದರ ಸಂಪರ್ಕವನ್ನು ಇಟ್ಟುಕೊಂಡೇ ಇರಬೇಕಾಗುತ್ತದೆ. ಪ್ರಾಪಂಚಿಕ ಆಸೆ-ಆಕಾಂಕ್ಷೆ, ಸ್ನೇಹ-ವಿರಹ, ಉಲ್ಲಾಸ-ವೇದನೆಗಳನ್ನು ದಾಟಲು ಪ್ರಯತ್ನಿಸಿ ಮನುಷ್ಯನು ತಿರುತಿರುಗಿ ಮತ್ತೆ ಅದಕ್ಕೇ ಬಂದು ಬೀಳುತ್ತಾನೆ. ಸಂಸಾರದ ಮಾಯೆಯಿಂದ ಪಾರಾಗಿ ದೈವೀಭಾವದಲ್ಲಿ ಪ್ರತಿಷ್ಠಿತನಾಗುವ ಉದ್ದೇಶದಿಂದ ಕಾಳೀಕೃಷ್ಣನು ಖಗೇನನೊಂದಿಗೆ ಸೇರಿದ್ದನು. ಆ ಉದ್ದೇಶವು ನಿಧಾನವಾಗಿ ಸಫಲವೇ ಆಗುತ್ತಿತ್ತು; ಆದರೆ ಜೊತೆಜೊತೆಗೇ ಅರಿವಿಲ್ಲದಂತೆಯೇ ಸಂಸಾರದ ಮಾಯೆಯು ಅವನ ಮನಸ್ಸನ್ನು ಹೇಗೋ ನುಸುಳಿ ದೃಢವಾಗಿ ಮನೆಮಾಡಿಕೊಂಡಿದೆ ಎಂಬುದು ಗಮನಕ್ಕೆ ಬಂದಾಗ ಕಾಳೀಕೃಷ್ಣನು ದಂಗಾಗಿ ಹೋದನು. ಏಕೆಂದರೆ ಖಗೇನನನ್ನು ಅವನು ಸ್ವಲ್ಪ ಹೆಚ್ಚಾಗಿಯೇ ಪ್ರೀತಿಸಿದ್ದನು; ಭಗವಂತನಿಗಿಂತಲೂ ಹೆಚ್ಚಾಗಿಯೇ ಎಂಬಂತೆ. ಸದಾಕಾಲ ಅವನೊಡನಿರಲು ಇಚ್ಛೆಯಾಗುತ್ತಿತ್ತು. ಅಲ್ಲದೆ ಮತ್ತೊಬ್ಬನು ಅವನ ಪ್ರೀತಿಯನ್ನು ಪಡೆಯುವುದು ಈತನಿಗೆ ಸಹ್ಯವಾಗುತ್ತಿರಲಿಲ್ಲ. ವಿಚಾರಶೀಲನಾದ ಖಗೇನನು ಸ್ನೇಹಿತನ ಈ ಮೋಹವನ್ನು ಅರ್ಥಮಾಡಿಕೊಂಡು ಕಾಳೀಕೃಷ್ಣನ ಹೃದಯದ ಆವೇಗವನ್ನು ಪೂರ್ಣವಾಗಿ ಭಗವಂತನೆಡೆಗೆ ಹರಿಸಲು ಬಹಳ ಪ್ರಯತ್ನಿಸಿದ; ಆದರೆ ಸ್ನೇಹಿತನ ಅಪಕ್ವ ಮನಸ್ಸು ಅದನ್ನು ಅರಿಯಲೊಲ್ಲದಾಗಿತ್ತು. ನೇತಾರನಾದ ಖಗೇನನು ಒಂದು ಎಲ್ಲೆಯೊಳಗೇ ಕುಳಿತರಾದೀತೆ? ಬಹು ತರುಣರ ದೃಷ್ಟಿ ಅವನ ಕಡೆಗೇ ನೋಡುತ್ತಿದ್ದವು; ಎಲ್ಲರೊಂದಿಗೂ ಅವನು ಬೆರೆಯಲೇಬೇಕಿತ್ತು. ಎಲ್ಲರಿಗೂ ಪ್ರೀತಿಯುಣಿಸಿ, ಸೇವೆ-ಸಹಾನುಭೂತಿ, ಆತ್ಮತ್ಯಾಗಗಳಿಂದ ಎಲ್ಲರನ್ನೂ ಹತ್ತಿರ ಸೆಳೆಯಬೇಕಿತ್ತು. ಎಲ್ಲರನ್ನೂ ಸತ್ಯ ಶುದ್ಧ ಕಲ್ಯಾಣದ ಮಾರ್ಗದಲ್ಲಿ ಕರೆದೊಯ್ಯಬೇಕಿತ್ತು. ಪ್ರಿಯ ಸ್ನೇಹಿತನು ಹತ್ತುಹಲವು ಕಡೆ ಭಾಗವಾಗಿ ಹೋಗುವುದನ್ನು ಕಂಡು ಕಾಳೀಕೃಷ್ಣನ ಮನಸ್ಸು ಕ್ಷೋಭೆಗೊಳ್ಳುತ್ತಿತ್ತು.

ಅಷ್ಟರಲ್ಲಿ ತಂದೆ ತ್ರೈಲೋಕ್ಯನಾಥನ ಪುಸ್ತಕ ಕಪಾಟಿನಲ್ಲಿದ್ದ ಸುರೇಶಚಂದ್ರ ದತ್ತನಿಂದ ಸಂಪಾದಿಸಲ್ಪಟ್ಟ 'ಶ್ರೀರಾಮಕೃಷ್ಣದೇವರ ಉಪದೇಶ', ರಾಮಚಂದ್ರ ದತ್ತನಿಂದ ಬರೆಯಲ್ಪಟ್ಟ 'ಶ್ರೀರಾಮಕೃಷ್ಣದೇವರ ಜೀವನ' ಮತ್ತು 'ತತ್ತ್ವಪ್ರಕಾಶಿಕಾ' ಮೊದಲಾದ ಪುಸ್ತಕಗಳು ಕಾಳೀಕೃಷ್ಣನ ಕೈಸೇರಿದವು. ಅವನು ಅವುಗಳನ್ನು ಬಹಳ ಮನಸ್ಸಿಟ್ಟು ಓದತೊಡಗಿದನು.* ಒಂದು ದಿನ ಕೆಲವು ಸ್ನೇಹಿತರು ಸೇರಿ ನೌಕೆಯೊಂದರಲ್ಲಿ 'ಭದ್ರಕಾಲಿ' ಎಂಬ ಪ್ರದೇಶದಲ್ಲಿದ್ದ, ಖಗೇನನ ತಂದೆಯ ಇಟ್ಟಿಗೆ ತಯಾರು ಮಾಡುವ ಸ್ಥಳಕ್ಕೆ ತಿರುಗಾಡಲು ಹೊರಟರು. ಮರಳಿ ಬರುವಾಗ ದಕ್ಷಿಣೇಶ್ವರದಲ್ಲಿ ಇಳಿದರು; ರಾತ್ರಿಯನ್ನು ಅಲ್ಲಿಯೇ ಕಳೆಯುವುದೆಂದು ನಿಶ್ಚಯಿಸಿದರು. ಅಲ್ಲಿಯ ಕೈಸಾಲೆಯಲ್ಲಿ ಬಾಗಿಲು ಕಾಯುವವರೊಂದಿಗೆ ಮಲಗಿ ನಿದ್ರಿಸಬೇಕೆಂದುಕೊಂಡಿದ್ದರು, ಆದರೆ ಅವರು ಇವರನ್ನು ಖಾಲಿ ಹೊಟ್ಟೆಯಲ್ಲಿ ರಾತ್ರಿ ಕಳೆಯಲು ಬಿಡದೆ, ಉಗ್ರಾಣದಿಂದ ಅಕ್ಕಿ, ಬೇಳೆ, ಮಡಕೆ, ಉಪ್ಪು, ಮಸಾಲೆ, ಉರುವಲು ಎಲ್ಲವನ್ನೂ ತಂದೇಬಿಟ್ಟರು. ಆದಕಾರಣ ಕಿಚುಡಿ ಮಾಡಲೇಬೇಕಾಯಿತು. ಸರಿ, ಅಡುಗೆಯ ಸಿದ್ಧತೆ ನಡೆಯಿತು.

* ತ್ರೈಲೋಕ್ಯನಾಥನಿಗೆ ರಾಮಚಂದ್ರ ದತ್ತನ ಪರಿಚಯವಿತ್ತು. ಅವನು ಡಾಕ್ಟರ್ ಎಂಬುದರಿಂದಲೂ, ಸಿಮ್ಲಾ ಪ್ರದೇಶದ ನಿವಾಸಿ ಎಂಬ ಕಾರಣದಿಂದಲೂ ರಾಮಚಂದ್ರನು ತಾನು ಪ್ರಕಟಿಸಿದ ಪುಸ್ತಕಗಳನ್ನು ಅವನಿಗೆ ಉಡುಗೊರೆ ನೀಡುತ್ತಿದ್ದನು.

ಆಗ ಕಾಳೀಕೃಷ್ಣ ಹಾಗೂ ಇನ್ನು ಕೆಲವರು ಪಂಚವಟಿಯತ್ತ ಧ್ಯಾನ ಮಾಡಲು ಹೋದರು. ಸುಧೀರನು ದಕ್ಷಿಣೇಶ್ವರವನ್ನು ಕಂಡಿದ್ದು ಇದೇ ಮೊದಲು.

ಇಷ್ಟೊಂದು ಉಲ್ಲಾಸ-ಆನಂದದ ನಡುವೆಯೂ ಕಾಳೀ ಕೃಷ್ಣನು ಖಿನ್ನಮನಸ್ಕನಾಗಿದ್ದುದನ್ನು ಖಗೇನನು ಗಮನಿಸಿದ್ದನು. ಪಂಚವಟಿಯಲ್ಲಿ ಧ್ಯಾನಮಾಡಿದ ನಂತರ ಖಗೇನನು ಕಾಳೀಕೃಷ್ಣ ನಿದ್ದಲ್ಲಿಗೆ ಬಂದು, ಅವನನ್ನು ಸಮಾಧಾನಪಡಿಸಲೆಂದು ಅವನ ಬೆನ್ನು ಸವರಲಾರಂಭಿಸಿದ. ತಡೆಹಿಡಿದಿದ್ದ ದುಃಖದ ಕಟ್ಟೆ ಯೊಡೆದು ಹೊರಹೊಮ್ಮಿತು; ಕಾಳೀಕೃಷ್ಣನು ಇದ್ದಕ್ಕಿದಂತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಏನು ಮಾಡಿದರೂ ಅವನ ಅಳು ನಿಲ್ಲದು. ಉಳಿದವರು ಇದನ್ನು ಕಂಡು ಅವಾಕ್ಕಾದರು. ಖಗೇನನು ಅದಕ್ಕೆ ಕಾರಣವೇನೆಂದು ಊಹಿಸಿ ತಿಳಿದುಕೊಂಡು, ''ಓ, ಇದೊಂದು ರೀತಿಯ ತಡೆಹಿಡಿಯಲಾಗದ ಭಾವೋದ್ವೇಗ!'' ಎಂದು ಹೇಳಿ, ಉಳಿದವರನ್ನು ಸುಮ್ಮನಾಗಿಸಿದ. ಕಾಳೀಕೃಷ್ಣನು ಶಾಂತನಾದದ್ದು ಒಂದು ಗಂಟೆಯ ನಂತರವೇ. ಮಾರನೇ ದಿನ ಎಲ್ಲರೂ ಕೊಲ್ಕತ್ತೆಗೆ ಹಿಂತಿರುಗಿದರು.

ಕ್ರಮೇಣ ಕಾಳೀಕೃಷ್ಣನಿಗೆ ಸ್ನೇಹಿತನ ಕಡೆಗಿದ್ದ ಒಲವು ಶ್ರೀಕೃಷ್ಣನ ಮೇಲಿನ ಮಧುರಭಾವದ ಭಕ್ತಿಯಾಗಿ ರೂಪಾಂತರ ಹೊಂದಿತು. ರಾಮಚಂದ್ರ ದತ್ತನು ಬರೆದ 'ಶ್ರೀರಾಮಕೃಷ್ಣ ದೇವನ ಜೀವನ' ಎಂಬ ಪುಸ್ತಕದಲ್ಲಿ, ಪರಮಹಂಸರು ಸಖೀಭಾವ ದಲ್ಲಿ ಸಾಧನೆ ಮಾಡಿದ್ದನ್ನು ಅವನೊಮ್ಮೆ ಓದಿದ್ದನು. ಆ ಸಾಧನೆ ಈಗ ಅವನ ಚಿತ್ತವನ್ನಾಕರ್ಷಿಸಿತು. ಸ್ತ್ರೀಯರ ನಾನಾವಿಧ ವೇಷ ಭೂಷಣಗಳನ್ನು ತನ್ನ ತಾಯಿಯಿಂದ, ಅವರಿಗೆ ಸ್ವಲ್ಪವೂ ಗೊತ್ತಾಗ ದಂತೆ ಸಂಗ್ರಹಿಸಿದನು. ಅವನ ಕೂದಲಂತೂ ಉದ್ದವಾಗಿಯೇ ಇತ್ತು - ಕೆಲವೊಮ್ಮೆ ಹಠ ಮಾಡಿ ತಾಯಿಯಿಂದ ಮುಡಿ ಕಟ್ಟಿಸಿ ಕೊಳ್ಳುತ್ತಿದ್ದ. (ಇವೆಲ್ಲ ಬಾಲಕನ ಹುಡುಗಾಟವೆಂದು ತಾಯಿಗೆ ಯಾವ ಸಂದೇಹವೂ ಉಂಟಾಗಲಿಲ್ಲ). ಈ ರೀತಿ ಸ್ತ್ರೀಯರಂತೆ ಅಲಂಕಾರ ಮಾಡಿ, ತನ್ನ ಕೊಠಡಿಯ ಬಾಗಿಲು ಹಾಕಿಕೊಂಡು, ರಾಧೆ-ಕೃಷ್ಣರು ಯಮುನಾತಟದಲ್ಲಿದ್ದ ಚಿತ್ರದ ಮುಂದೆ ಕುಳಿತು ಧ್ಯಾನ, ಪೂಜೆ, ಪ್ರಾರ್ಥನೆಗಳಲ್ಲಿ ತೊಡಗುತ್ತಿದ್ದ.

ಅವನ ಹಾವಭಾವ, ಚಲನ ವಲನಗಳೆಲ್ಲ ಬಹುತೇಕ ಹುಡು ಗಿಯರಂತೆಯೇ ಆಗಿಬಿಟ್ಟವು. ತಾನು ಪುರುಷನೆಂದು ಅವನಿಗೆ ಅನ್ನಿಸುತ್ತಲೇ ಇರಲಿಲ್ಲ. ಚಂಡೀದಾಸ, ವಿದ್ಯಾಪತಿ ಮುಂತಾದ ವೈಷ್ಣವ ಕವಿಗಳ ಪದಾವಳಿಗಳನ್ನೂ, ಜಯದೇವನ ಗೀತ ಗೋವಿಂದವನ್ನೂ ಓದುತ್ತ ಅವನು ಮೈಮರೆಯುತ್ತಿದ್ದ. ಅವನ ಮನಸ್ಸಿನಲ್ಲೀಗ ಮೊದಲಿದ್ದ ಅಶಾಂತಿ ಇರಲಿಲ್ಲ. ಅಂಬಿಗನಿಲ್ಲದೆ ದುಃಸ್ಸಾಹಸದಿಂದ ದೋಣಿ ನಡೆಸುತ್ತ ಹೊರಟವನು ಒಂದು ದೊಡ್ಡ ಸುಳಿಗೆ ಸಿಕ್ಕಿಬೀಳುವಷ್ಟರಲ್ಲಿಯೇ ಅದರಿಂದ ಪಾರಾ ದಂತಾಯಿತು. ನಾಯಕ ಖಗೇನನೂ ತನ್ನ ಸ್ನೇಹಿತನ ಮುಖದಲ್ಲಿ ಶಾಂತಿ, ಸಮಾಧಾನಗಳನ್ನು ಗುರುತಿಸಿ ಆನಂದಿತನಾದ.

ನಿಜಕ್ಕೂ ಅದು ಅಂಬಿಗನಿಲ್ಲದ ದೋಣಿಯ ಪಯಣವೇ ಸರಿ. ಈ ಬಾರಿ ದೋಣಿ ಬಿರುಗಾಳಿಗೆ ಸಿಕ್ಕಿ ಹೊಯ್ದಾಡಿತು, ಆದರೂ ಹೇಗೋ ರಕ್ಷಣೆ ಪಡೆಯಿತು... ಧಾರ್ಮಿಕ ಪುಸ್ತಕಗಳ ನ್ನೋದುತ್ತ ಕಾಳೀಕೃಷ್ಣನ ವೈರಾಗ್ಯಭಾವ ಪ್ರಬಲಗೊಳ್ಳುತ್ತಿತ್ತು. ಖಗೇನನೊಂದಿಗೆ ಚರ್ಚಿಸಿ, ಮನೆಯಿಂದ ಓಡಿಹೋಗಿ ದಾರ್ಜಿ ಲಿಂಗ್‌ನ ಯಾವುದಾದರೊಂದು ಗುಹೆಯಲ್ಲಿ ತಪಸ್ಸು ಮಾಡ ಬೇಕು, ಭಿಕ್ಷೆ ಬೇಡಿ ತಿನ್ನಬೇಕು ಎಂದು ನಿಶ್ಚಯಿಸಿದರು. ಈ ರೀತಿಯ ತಪಸ್ಸಿಗಾಗಿ ಶರೀರವನ್ನು ಇನ್ನೂ ದೃಢಗೊಳಿಸಬೇಕು ಎಂದು ಅವರಿಗೆ ಅನ್ನಿಸಿತು. ಖಗೇನನ ಒಬ್ಬ ಆತ್ಮೀಯ ಡೈಮಂಡ್ ಹಾರ್ಬರಿನಲ್ಲಿದ್ದ.* ಇಬ್ಬರೂ ಅಲ್ಲಿಗೆ ಹೋಗಿ ೧೫ ದಿನಗಳಿದ್ದು, ಹವೆ ಬದಲಾವಣೆ ಮಾಡಿಕೊಂಡು, ಸದೃಢರಾಗಿ ಬಂದರು. ಕಂಬಳಿ ಹಾಗೂ ಅಗತ್ಯವಿರುವ ಸಾಮಗ್ರಿಗಳನ್ನು ಖರೀದಿಸಿದರು. ಮನೆ ಬಿಡಲು ನಿಶ್ಚಯಿಸಿದ ಎರಡು ದಿನಗಳ ಮೊದಲು ವೈರಾ ಗ್ಯದ ಉದ್ದೀಪನೆಗಾಗಿ ಸ್ಟಾರ್ ಥಿಯೇಟರ್‌ನಲ್ಲಿ ನಡೆಯುತ್ತಿದ್ದ 'ಚೈತನ್ಯಲೀಲೆ'ಯನ್ನೂ ನೋಡಿ ಬಂದದ್ದಾಯಿತು. ಹೊರಡುವ ಹಿಂದಿನ ದಿನ ಖಗೇನನ ಮನೆಯಲ್ಲೇ ಇಳಿದುಕೊಂಡರು. ಗಾಢ ರಾತ್ರಿಹೊತ್ತು ಎದುರುಮನೆಯ ನಂದಬಾಬು ಖಗೇನನ ಕಿಟಿಕಿ ಯನ್ನು ಮೆತ್ತಗೆ ತಟ್ಟಿ, ಅವನನ್ನು ಎಬ್ಬಿಸಿದರು. ನಂದಬಾಬು ವಿಜಯಕೃಷ್ಣ ಗೋಸ್ವಾಮಿಯ ಶಿಷ್ಯ; ಯೋಗಾಭ್ಯಾಸ, ಸಾಧನೆ-ಭಜನೆ ಮಾಡುತ್ತಿದ್ದರೆಂದು ಖಗೇನನಿಗೆ ಅವರನ್ನು ಕಂಡರೆ ಗೌರವ ವಿತ್ತು. ಅವರೊಂದಿಗೆ ಆಗಾಗ ಆಧ್ಯಾತ್ಮಿಕ ಚರ್ಚೆಯೂ ನಡೆಯು ತ್ತಿತ್ತು. ಅವರೀಗ ಖಗೇನನಿಗೆ, ''ಏನು, ನೀವು ಸಂಸಾರ ತ್ಯಾಗ ಮಾಡಿ ಹೊರಟುಹೋಗಬೇಕೆಂದು ತೀರ್ಮಾನಿಸಿದ್ದೀರಾ? ಇದ ರಿಂದ ನಿಮಗೆ ಅಮಂಗಳ ಹಾಗೂ ಗಂಡಾಂತರ ಕಾದಿದೆ ಎಂದು ನನಗೆ ದರ್ಶನವಾಗಿದೆ'' ಎಂದರು. ನಂದಬಾಬು ಒಬ್ಬ ಉನ್ನತ ಮಟ್ಟದ ಸಾಧಕರೆಂದು ಖಗೇನನಿಗೆ ನಂಬಿಕೆಯಾದ್ದರಿಂದ ಅವರ ಮಾತನ್ನು ಗೌರವಿಸಿ, ಸಂನ್ಯಾಸಿಗಳಾಗಲು ಓಡಿಹೋಗುವ ವಿಚಾರ ವನ್ನು ಕೈಬಿಟ್ಟನು. ಕಾಳೀಕೃಷ್ಣನು ಭಗ್ನಮನಸ್ಕನಾಗಿ ತನ್ನ ನಾರೀ ಕೇಲಡಂಗಾದ ಮನೆಗೆ ಹಿಂತಿರುಗಿದನು.

ಹೀಗೆ ಉತ್ಸಾಹೀ ತರುಣರಿದ್ದ ಜೀವನನೌಕೆಯು ಅಲ್ಲಲ್ಲಿ ನಿಲ್ಲುತ್ತಾ, ಹೊಯ್ದಾಡುತ್ತಾ ಪಯಣಿಸುತ್ತಿತ್ತು. ಕೊನೆಗೂ ಅವನಿಗೆ ನಿಸ್ಸಂದಿಗ್ಧವಾದ ಜೀವನಮಾರ್ಗದ ಸುಳಿವು ಸಿಕ್ಕಿತು. ಆಗ ಕಾಂಕುರ್‌ಗಾಛಿ ಯೋಗೋದ್ಯಾನದಲ್ಲಿ ನಡೆಯಲಿದ್ದ ಶ್ರೀರಾಮ ಕೃಷ್ಣ ಪರಮಹಂಸರ ಜನ್ಮದಿನೋತ್ಸವದ ನಿಮಿತ್ತ ಕೊಲ್ಕತ್ತದ ರಾಜ ಬೀದಿಯ ರಸ್ತೆಗಳಲ್ಲಿ ಹಂಚುತ್ತಿದ್ದ ಕರಪತ್ರವು ಈ ತರುಣರ ಕೈಸೇರಿತು. ಎಲ್ಲರ ಮನದಲ್ಲೂ ಅಲ್ಲಿಗೆ ಹೋಗಿ ನೋಡಿ ಬರುವ ಕುತೂಹಲ ಉಂಟಾಯಿತು. ನಾಯಕನಾದ ಖಗೇನನೊಂದಿಗೆ ಸಿಮ್ಲಾದ ನಂ. ೧೧, ಮಧುರಾಯ್ ಗಲ್ಲಿಯಲ್ಲಿದ್ದ ರಾಮಚಂದ್ರ ದತ್ತನ ಮನೆಗೆ ಹೋಗಿ ಅಲ್ಲಿನ ವಿಷಯಗಳನ್ನೆಲ್ಲ ಸಂಗ್ರಹಿಸಿದರು.

* ಕೊಲ್ಕತ್ತಾದ ದಕ್ಷಿಣ ಭಾಗದಲ್ಲಿರುವ ಒಂದು ಉಪನಗರ; ಹುಗಲೀ ನದಿ ಸಮುದ್ರವನ್ನು ಸೇರುವ ಪ್ರದೇಶ.



**ಕಾಂಕುರ್‌ಗಾಛಿ ಯೋಗೋದ್ಯಾನ**

ಉತ್ಸವದ ದಿನದಂದು ಎಲ್ಲರೂ ಅಲ್ಲಿಗೆ ಹೋಗಿ, ಮೆರವಣಿಗೆಯಲ್ಲಿ ಹಾಡು ಹೇಳುತ್ತಾ ಕಾಂಕುರ್‌ಗಾಛಿಗೆ ಹೊರಟರು. ಕಾಳೀಕೃಷ್ಣನೇ ಬರೆದ ಸ್ಮೃತಿಚಿತ್ರದಲ್ಲಿ ಈ ರೀತಿ ಇದೆ:

''ಸಂಕೀರ್ತನೆಯಲ್ಲಿ ರಾಮಬಾಬು, ಮನೋಮೋಹನ ಬಾಬು, ಕಾಲೀಪದ ಬಾಬು (ದಾನಾಕಾಲಿ), ದೇವೇನ್‌ಬಾಬು ಮುಂತಾದ ಭಕ್ತರೆಲ್ಲ ಸೇರಿಕೊಂಡು ಹಾಡುತ್ತ ಮುಂದುವರಿಯುತ್ತಿದ್ದರು. '**ತ್ರಿತಾಪದಿ ಸದಾ ದೇಹ ಸುಡುತಿದೆ...**' ಎಂಬ ಹಾಡನ್ನು ಅವರು ಹಾಡಿದರು. ಯೋಗೋದ್ಯಾನದಲ್ಲಿ ರಾಮಬಾಬು ಹಾಗೂ ಮನೋಮೋಹನ್‌ಬಾಬು ನರ್ತಿಸುತ್ತಾ ಭಾವೋನ್ಮತ್ತರಾದರು. ನಾನು ಇದೇ ಮೊದಲು ಭಾವಾವೇಶವೆಂದರೆ ಏನೆಂಬುದನ್ನು ನೋಡಿದ್ದೆ. ರಾಮ್‌ಬಾಬು 'ಜೈ ರಾಮಕೃಷ್ಣ' ಎಂದು ಹೂಂಕರಿಸುತ್ತಾ ಸಿಂಹವಿಕ್ರಮದಿಂದ ಸುತ್ತುತ್ತಾ ನರ್ತಿಸತೊಡಗಿದರು. ಮನೋಮೋಹನ ಬಾಬು ಅಪೂರ್ವ ದರ್ಶನವನ್ನು ಕಂಡವರಂತೆ ಕಿಲಕಿಲನೆ ವಿಚಿತ್ರವಾಗಿ ನಗುತ್ತ, ಮೈಬಾಗಿಸುತ್ತ, ಸ್ತಬ್ಧರಾಗುತ್ತ, ಅಲ್ಲಿಲ್ಲಿ ಓಡಾಡತೊಡಗಿದರು. ಈ ಸಂಭ್ರಮದಲ್ಲಿ ಎಲ್ಲರೂ ಮೈಮರೆತರು. ಇವೆಲ್ಲವನ್ನೂ ನೋಡಿ ನಾವು ಬಹಳ ಪ್ರಭಾವಿತರಾದೆವು. ರಾಮಬಾಬುವು ನಮ್ಮೆಲ್ಲರನ್ನೂ ತುಂಬ ಪ್ರೀತಿಯಿಂದ ಉಪಚರಿಸಿ, ಮತ್ತೆ ಬರಲು ಹೇಳಿದರು.''

ಅಂದಿನಿಂದ ಪ್ರತಿ ಶನಿವಾರ, ಭಾನುವಾರಗಳಲ್ಲಿ ಈ ಯುವಕರಿಗೆ ಕಾಂಕುರ್‌ಗಾಛಿಯೇ ಎರಡನೇ ಮನೆಯಾಯಿತು. ಶ್ರೀರಾಮಕೃಷ್ಣರು ಈ ತರುಣರೆಲ್ಲರ ಹೃದಯವನ್ನು ಆವರಿಸಿಬಿಟ್ಟರು. 'ರಾಮಕೃಷ್ಣರು ಇಷ್ಟು ಹತ್ತಿರವಿದ್ದೂ ನಮಗೇಕೆ ಅವರ ಸುಳಿವೂ ಸಿಗಲಿಲ್ಲ?' ಎಂದು ಎಲ್ಲರಿಗೂ ಆಶ್ಚರ್ಯವಾಯಿತು. ನಿರಾತಂಕವೂ ಪ್ರಶಸ್ತವೂ ಆದ ಇಷ್ಟು ದೊಡ್ಡ ರಾಜಮಾರ್ಗ, ಕಾಡಿನ ಮರೆಯಲ್ಲಿ ಹೇಗೆ ಅವಿತುಕೊಂಡಿತ್ತೋ ತಿಳಿಯದು! ರಾಮಬಾಬುವಿನೊಂದಿಗಿನ ಅವರ ಸಂಪರ್ಕ ಇನ್ನಷ್ಟು ಆತ್ಮೀಯವಾಯಿತು. ಅವರು ಈ ಯುವಕರನ್ನು ಹತ್ತಿರ ಕುಳ್ಳಿರಿಸಿ, ಶ್ರೀರಾಮಕೃಷ್ಣರ ಬಗ್ಗೆ ಗಂಟೆಗಟ್ಟಲೆ ಮಾತನಾಡುತ್ತಿದ್ದರು. ಅದನ್ನು ಕೇಳಿದ ಈ ತರುಣರ ವಿಸ್ಮಯಕ್ಕೆ ಪಾರವೇ ಇರುತ್ತಿರಲಿಲ್ಲ.

ಯೋಗೋದ್ಯಾನದಲ್ಲಿ ಆಗ ಒಬ್ಬ ಬ್ರಾಹ್ಮಣ ಪೂಜೆ ಹಾಗೂ ನೈವೇದ್ಯ ಮಾಡುವ ಜವಾಬ್ದಾರಿ ಹೊತ್ತಿದ್ದ. ಅವನಿಗೆ ವೇತನ ನೀಡಲಾಗುತ್ತಿತ್ತು (ಇದಕ್ಕೂ ಹಿಂದೆ ಶ್ರೀರಾಮಕೃಷ್ಣರ ಸೋದರಳಿಯ ಹೃದಯನು ಸ್ವಲ್ಪಕಾಲ ಈ ಕೆಲಸ ಮಾಡಿಕೊಂಡಿದ್ದ). ಮಳೆಗಾಲದಲ್ಲಿ ಆ ಬ್ರಾಹ್ಮಣ ಕೆಲಸಬಿಟ್ಟು ಹೊರಟುಹೋದ. ಮತ್ತೊಬ್ಬ ಬ್ರಾಹ್ಮಣ ಸಿಗುವವರೆಗೆ ಈ ಯುವಕರೇ ಆ ಸೇವೆಯ ಜವಾಬ್ದಾರಿ ವಹಿಸಿಕೊಂಡರು. ಅದರ ಬಗ್ಗೆ ಕಾಳೀಕೃಷ್ಣನು ಬರೆದ ಸ್ಮೃತಿಚಿತ್ರ ಹೀಗದೆ:

''ಈ ಕೆಲಸಕ್ಕೆ ಕಾಂಕುರ್‌ಗಾಛಿಗೆ ಇಬ್ಬಿಬ್ಬರು ಸರದಿಯಂತೆ ಹೋಗಬೇಕಾಗುತ್ತಿತ್ತು. ಆ ಜಾಗವೆಲ್ಲ ಆಗ ಕಾಡೇ ಆಗಿತ್ತು. ಹಳ್ಳ-ತಿಟ್ಟುಗಳಿಂದ ಕೂಡಿದ ರಸ್ತೆಯೂ ಸರಿಯಿರುತ್ತಿರಲಿಲ್ಲ. ಮಳೆಗಾಲದಲ್ಲಿ ಸೊಂಟದೆತ್ತರ ನೀರಿನಲ್ಲಿ ನಡೆದು ಹೋಗಬೇಕಾಗುತ್ತಿತ್ತು. ಮೇಲಾಗಿ ಮಲೇರಿಯಾ ಹಾವಳಿಯೂ ಇತ್ತು. ಆದ್ದರಿಂದ ಅಲ್ಲಿ ಸೇವಾಕಾರ್ಯ ಮಾಡುತ್ತಿದ್ದವರು ರಾತ್ರಿ ಯೋಗೋದ್ಯಾನದಲ್ಲಿ ತಂಗದೆ, ದೇವರ ನೈವೇದ್ಯ ಹಾಗೂ ಶಯನವಾದ ಮೇಲೆ ಒಂದೂವರೆ ಮೈಲಿಯಷ್ಟು ದೂರ ನಡೆದು ನಾರಿಕೇಲ್‌ಡಂಗಾದಲ್ಲಿದ್ದ ನಮ್ಮ ಮನೆಗೆ ಬಂದು ಮಲಗುತ್ತಿದ್ದರು. ನಾವು ಆ ರೀತಿ ಸುಮಾರು ಒಂದೂವರೆ ತಿಂಗಳು ದೇವರ ಸೇವೆಯನ್ನು ನಡೆಸಿಕೊಂಡು ಬಂದೆವು. ಈ ಸಮಯದಲ್ಲೇ ಒಮ್ಮೆ ಉಪೇನನ (ನಮ್ಮ ಬಳಗದ ಮತ್ತೊಬ್ಬ ಯುವಕ) ಪ್ರಸ್ತಾಪದಂತೆ, ನಾವೆಲ್ಲಾ ಭಿಕ್ಷೆ ಎತ್ತಿ ಏನು ದೊರೆಯುತ್ತದೆಯೋ ಅದರಿಂದಲೇ ಯೋಗೋದ್ಯಾನದಲ್ಲಿ ಶ್ರೀರಾಮಕೃಷ್ಣರಿಗೆ ಒಂದು ದಿನ ನೈವೇದ್ಯ ಮಾಡಬೇಕೆಂದು ಸಂಕಲ್ಪ ಮಾಡಿಕೊಂಡೆವು. ಇದಕ್ಕಾಗಿ ನಮ್ಮಲ್ಲಿ ಕೆಲವರು ಭಿಕ್ಷೆ ಎತ್ತಿ, ಲಭಿಸಿದಷ್ಟು ಅಕ್ಕಿ ಹಾಗೂ ಹಣವನ್ನು ಸಂಗ್ರಹಿಸಿ ಇಡುತ್ತಿದ್ದರು. ಈ ಉದ್ದೇಶಕ್ಕಾಗಿಯೇ ಸುಧೀರ್ ಹಾಗೂ ಇನ್ನೂ ಎರಡು-ಮೂರು ಮಂದಿ ವಿದ್ಯಾಸಾಗರನ* ಬಳಿಗೆ ಹೋಗಿದ್ದರು. ಆತನು ಎಲ್ಲವನ್ನೂ ಕೇಳಿ, ಮೃದುಮಾತಿನಲ್ಲಿ, ''ನೋಡಿರಪ್ಪಾ, ನೀವೆಲ್ಲಾ ದುಡಿದು ಸಂಪಾದನೆ ಮಾಡಿ, ಅದರಿಂದ ನೈವೇದ್ಯ ಕೊಡುವ ವ್ಯವಸ್ಥೆ ಮಾಡಿ'' ಎಂದು ಹೇಳಿದರು. ಏನೇ ಇರಲಿ, ಭಿಕ್ಷೆಯಿಂದ ಏನು ದೊರೆಯುತ್ತಿತ್ತೊ ಅದರಿಂದ ಒಂದು ದಿನವಂತೂ ನೈವೇದ್ಯ ಮಾಡಿದ್ದೆವು. ನಮ್ಮ ನಡುವೆ ಉಪೇನನು ಪ್ರಸಾದದ ದೊಡ್ಡ ಭಕ್ತನಾಗಿದ್ದ, ಹೊಟ್ಟೆಬಾಕನೂ ಕೂಡ. ಉತ್ಸವದ ಸಮಯಗಳಲ್ಲಿ ಎಷ್ಟೊಂದು ಅತಿಯಾಗಿ ತಿನ್ನುತ್ತಿದ್ದನೆಂದರೆ, ಕೊನೆಗೆ ಅವನ ಹೊಟ್ಟೆ ಉಬ್ಬರಿಸಿ ಬರುತ್ತಿತ್ತು; ಭಾವಣೆಯಲ್ಲಿ ಮಲಗಿ ಹೊಟ್ಟೆಯ ಮೇಲೆ ಒದ್ದೆ ಬಟ್ಟೆಯನ್ನು ಹಾಕಿಕೊಳ್ಳುತ್ತಿದ್ದ. ಪ್ರಸಾದ ಮುಗಿದು ಹೋದರೂ ಬಿಡುತ್ತಿರಲಿಲ್ಲ, 'ಕಡೇಪಕ್ಷ ಉಳಿದಿರುವ ಪುಡಿ ಪ್ರಸಾದವನ್ನಾದರೂ ಕೊಡಿ' ಎಂದು ಒತ್ತಾಯಿಸುತ್ತಿದ್ದ.

''ಆ ದಿನಗಳಲ್ಲಿ ಭಾನುವಾರ ಬಿಟ್ಟು ಬೇರೆ ದಿನ ಯಾರೂ ಹೆಚ್ಚಾಗಿ ಯೋಗೋದ್ಯಾನಕ್ಕೆ ಹೋಗುತ್ತಿರಲಿಲ್ಲ. ಭಾನುವಾರವೂ

* ಈಶ್ವರಚಂದ್ರ ವಿದ್ಯಾಸಾಗರ

ಸಹ ೮-೧೦ ಜನ ಹಳೆಯ ಭಕ್ತರು ಮಾತ್ರ ಹೋಗುತ್ತಿದ್ದರು. ನಂತರದ ದಿನಗಳಲ್ಲಿ ಅಪೂರ್ವಬಾಬು ಅಲ್ಲಿಯೇ ಇರುತ್ತಿದ್ದರು. ಇನ್ನೂ ಒಂದೆರಡು ವರ್ಷಗಳ ನಂತರ ಕಾಳಿ (ಮುಂದೆ ಸ್ವಾಮಿ ಯೋಗವಿನೋದ), ಸುರೇಶ, ಕುಂಜ (ವಿಹಾರೀದಾಸ್) ಮುಂತಾದವರು ರಾಮಬಾಬುವಿನ ಶಿಷ್ಯತ್ವ ಪಡೆದು ಅಲ್ಲಿಯೇ ಇರಲಾರಂಭಿಸಿದರು. ರಾಮಬಾಬುವೂ ಆಗ ಉದ್ಯಾನದಲ್ಲೇ ಇರುತ್ತಿದ್ದರು. ಎಲ್ಲರೂ ಅವರ ಕುದುರೆಗಾಡಿಯಲ್ಲೇ ಕೆಲಸದ ಸ್ಥಳಕ್ಕೆ ಹೋಗುತ್ತಿದ್ದರು. ರಾಮಬಾಬು ಕೆಲವರಿಗೆ ತಾನು ಕೆಲಸ ಮಾಡುತ್ತಿದ್ದ ಮೆಡಿಕಲ್ ಕಾಲೇಜಿನಲ್ಲೇ ತಮ್ಮ ಸಹಾಯಕನ ಕೆಲಸವನ್ನೋ ಬೇರೆ ಹುದ್ದೆಯನ್ನೋ ಕೊಡಿಸಿದ್ದರು. ಕಾಳಿ ಹಾಗೂ ಸುರೇಶರು ಮೊದಮೊದಲು ಉದ್ಯಾನದಲ್ಲಿದ್ದುಕೊಂಡು, ಪೂಜೆ ಮಾಡಿಕೊಂಡು ಕಾಲೇಜಿಗೆ ಹೋಗುತ್ತಿದ್ದರು. ನಂತರ ರಾಮಬಾಬು ಅವರಿಗೆ ಕಾಷಾಯವಸ್ತ್ರವನ್ನು ಕೊಟ್ಟರು. ಅಷ್ಟು ಹೊತ್ತಿಗೆ ಹುಡುಗರಿಬ್ಬರೂ ವಿದ್ಯಾಭ್ಯಾಸ ಬಿಟ್ಟುಬಿಟ್ಟಿದ್ದರು. ರಾಮಬಾಬುವೇ ಮೊದಲು 'ಪ್ರಭಾತ ಫೇರಿ'ಯನ್ನು ಪ್ರಾರಂಭಿಸಿದರು. ಪ್ರಾತಃಕಾಲದಲ್ಲಿ ಅವರ ಶಿಷ್ಯರು ಕಾಷಾಯ ವಸ್ತ್ರವನ್ನುಟ್ಟು, ತಾಳ ಹಾಕುತ್ತಾ ಹಾಡುತ್ತಿದ್ದರು:

**'ದಯಾಲನ ನಾಮ ಕೇಳಿ ಭಕತನೆದ್ದ ಮಗ್ನ ಹೃದಯದಿ**
**ರಾಮಕೃಷ್ಣ ರಾಮಕೃಷ್ಣ - ನಾಮಸುಧಾಪಾನದಿ'**

''ಈ (ದಾನಾಕಾಳಿ ವಿರಚಿತ) ಹಾಡನ್ನು ಹಾಡುತ್ತಾ ನಮ್ಮ ಮನೆಯ ಸಮೀಪದವರೆಗೆ ಒಂದು ಸುತ್ತು ಹಾಕಿ ಯೋಗೋದ್ಯಾನಕ್ಕೆ ಮರಳುತ್ತಿದ್ದರು. ಮುಂದೆ ಭಾನುವಾರದಂದು ರಾಮಬಾಬು ಸ್ಟಾರ್ ಥಿಯೇಟರ್‌ನಲ್ಲಿ ಶ್ರೀರಾಮಕೃಷ್ಣರ ಅವತಾರತ್ವದ ಬಗ್ಗೆ ಉಪನ್ಯಾಸಮಾಲೆಯನ್ನು ನೀಡುತ್ತಿದ್ದರು. ಆಗಲೂ ಅವರು ಕಾವಿ ಧರಿಸಿದ ತಮ್ಮ ಶಿಷ್ಯರೊಂದಿಗೆ ಅದೇರೀತಿ ಠಾಕೂರರ ಹಾಡನ್ನು ಹಾಡುತ್ತಾ ಬರುತ್ತಿದ್ದರು. ಉಪನ್ಯಾಸಕ್ಕೆ ಮೊದಲು ಹಾಗೂ ಕೊನೆಯಲ್ಲಿ ವೇದಿಕೆಯ ಮೇಲೆ ಸಂಕೀರ್ತನೆ ನಡೆಯುತ್ತಿತ್ತು.''

೩

ಗಂಭೀರ ವ್ಯಕ್ತಿತ್ವವುಳ್ಳ ಅಧ್ಯಾಪಕರೊಬ್ಬರ ಮೇಲೆ ವಿದ್ಯಾರ್ಥಿಗಳಿಗೆಲ್ಲ ಭಯಮಿಶ್ರಿತ ಗೌರವವಿತ್ತು. ಅವನ ಹೆಸರೇ - ಮಹೇಂದ್ರನಾಥ ಗುಪ್ತ. ಅವರು ನಿಧಾನವಾಗಿಯೂ ಶಾಂತವಾಗಿಯೂ ಆಂಗ್ಲ ಭಾಷೆಯನ್ನು ಹೇಳಿಕೊಡುತ್ತಿದ್ದರು. ಒಂದೇ ಒಂದು ವ್ಯರ್ಥ ಮಾತನ್ನೂ ಆಡುತ್ತಿರಲಿಲ್ಲ. ದಾರ್ಶನಿಕರಂತೆ ಅಂತರ್ಮುಖಿಯಾದ ಕಣ್ಣುಗಳು ಅವರದು. ಬಿಳಿ ಪಾಯಿಜಾಮದ ಮೇಲೆ ಅಲ್ಪಾಕಾ ತುಪ್ಪಳದ ಸಡಿಲವಾದ ಕಪ್ಪು ನಿಲುವಂಗಿ, ನೀಳವಾದ ಗಡ್ಡ. ನೋಡಿದೊಡನೆಯೇ ಗೌರವ ಮೂಡಬೇಕು. ರಸ್ತೆಯಲ್ಲಿ ಓಡಾಡುವಾಗ ಅವರ ದೃಷ್ಟಿ ನೆಲದ ಮೇಲೆ, ತೋರುಬೆರಳು ತುಟಿಗಳ ಮೇಲೆ, 'keep silence' 'ಸುಮ್ಮನಿರು' ಎಂದು ನಿರ್ದೇಶಿಸುತ್ತಿರುವಂತೆ. ಉಪಾಹಾರದ ವಿರಾಮದಲ್ಲಿ ಅಧ್ಯಾಪಕರುಗಳ ಕೊಠಡಿಯಲ್ಲಿ ಕುಳಿತು ಹರಟೆ ಹೊಡೆಯದೆ, ಮಹಡಿಯನ್ನೇರಿ ಎಲ್ಲೋ ಅದೃಶ್ಯರಾಗುತ್ತಿದ್ದರು.

ಮಹೇಂದ್ರಬಾಬುವಿಗೆ ನಿಜವಾಗಿಯೂ ಅನೇಕ ಧಾರ್ಮಿಕ ವಿಷಯಗಳು ತಿಳಿದಿವೆ ಎಂದು ವಿಚಾರಶೀಲನಾದ ಖಗೇನನಿಗೆ ಅನ್ನಿಸುತ್ತಿತ್ತು. ಖಗೇನನು ಒಂದು ದಿನ ಈ ಅಧ್ಯಾಪಕರಿಗೆ ಗೊತ್ತಿಲ್ಲದಂತೆ ಅವರನ್ನು ಹಿಂಬಾಲಿಸಿ, ಅವರು ತಮ್ಮ ತಿಂಡಿಯ ವಿರಾಮದ ಸಮಯವನ್ನು ಕಳೆಯುವ ಬಗೆಯನ್ನು ಕಂಡುಹಿಡಿದ; ಅಂದಿನಿಂದ ತನ್ನ ಊಹೆಯ ಬಗ್ಗೆ ಅವನಿಗೆ ಯಾವುದೇ ಸಂಶಯ ಉಳಿಯಲಿಲ್ಲ. ಮಹೇಂದ್ರನಾಥ ಗುಪ್ತರು ಬೇರೆಯವರ ಗಮನಕ್ಕೆ ಬಾರದಂತೆ ಮೆಟ್ಟಿಲು ಹತ್ತಿ, ಉಪ್ಪರಿಗೆಯ ಕೊಠಡಿಗೆ ಹೋಗಿ ಕುಳಿತುಕೊಳ್ಳುತ್ತಿದ್ದರು. ತಮ್ಮ ಜೇಬಿನಿಂದ ಒಂದು ಚಿಕ್ಕ ನೋಟು ಪುಸ್ತಕವನ್ನು* ಹೊರತೆಗೆದು ಒಮ್ಮೊಮ್ಮೆ ಓದಿ, ಸ್ವಲ್ಪ ಹೊತ್ತು ಕಣ್ಣುಮುಚ್ಚಿ ಧ್ಯಾನ ಮಾಡುತ್ತಿದ್ದರು. ಖಗೇನನು ಒಂದು ದಿನ ಧೈರ್ಯಮಾಡಿ ಅವರಿದ್ದಲ್ಲಿಗೆ ಹೋಗಿ ಮಾತನಾಡಿದನು. ಅದು ಅವನಿಗೆ ಬಹಳ ಇಷ್ಟವಾಯಿತು. ಯಾರನ್ನು ತಾವೆಲ್ಲರೂ ಇಷ್ಟದೈವ ಎಂದು ಪರಿಗಣಿಸಿದ್ದರೊ, ಆ ಶ್ರೀರಾಮಕೃಷ್ಣರನ್ನು ಅವರು ಕಂಡಿದ್ದರು, ಅವರ ಸತ್ಸಂಗ ಮಾಡಿ, ಕೃಪೆಯನ್ನೂ ಪಡೆದಿದ್ದರು! ಇದು ತಿಳಿದಾಗಿನಿಂದ ಖಗೇನನು ಆಗಾಗ ತಿಂಡಿಯ ಬಿಡುವಿನ ಸಮಯದಲ್ಲಿ ಈ ಅಧ್ಯಾಪಕರ ಬಳಿಗೆ ಹೋಗಿ, ಅವರ ಬಳಿ ಕುಳಿತು ಆಧ್ಯಾತ್ಮಿಕ ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದ. 'ಹುಡುಗರನ್ನು ಮೋಡಿ ಮಾಡುವ ಮಾಸ್ಟರ್' ನಿಗೆ ಕೂಡ ಈ ದೈವಾನುರಾಗಿ ಯುವಕರೊಂದಿಗೆ ಮಾತನಾಡಲು ಉದಾಸೀನ ಭಾವವಾಗಲಿ, ನಿರಾಸಕ್ತಿಯಾಗಲಿ ಉಂಟಾಗುತ್ತಿರಲಿಲ್ಲ. ಖಗೇನನು ಮಾಸ್ಟರ್ ಮಹಾಶಯನ ಮನೆಗೂ ಆಗಾಗ ಹೋಗಲಾರಂಭಿಸಿದ.

*(ಮುಂದುವರಿಯುವುದು)*

* ಶ್ರೀರಾಮಕೃಷ್ಣರೊಂದಿಗೆ ನಡೆಯುತ್ತಿದ್ದ ಸಂಭಾಷಣೆ ಹಾಗೂ ಘಟನೆಗಳನ್ನು ಆ ಚಿಕ್ಕ ನೋಟ್‌ಪುಸ್ತಕದಲ್ಲಿ ಮಾಸ್ಟರ್ ಮಹಾಶಯರು ಸಂಕ್ಷಿಪ್ತವಾಗಿ ಬರೆದಿಟ್ಟಿದ್ದರು. ಅದರ ಸಹಾಯದಿಂದಲೇ ಮುಂದೆ 'ಶ್ರೀರಾಮಕೃಷ್ಣ ಕಥಾಮೃತ ('ವಚನವೇದ') ಎಂಬ ಪುಸ್ತಕವನ್ನು ರಚಿಸಿ ಪ್ರಕಟಿಸಲಾಯಿತು. *-ಸಂ*

ಭಕ್ತನು ದೇವರ ನಾಮ ಹಾಗೂ ರೂಪಗಳನ್ನು ಕುರಿತು ಧ್ಯಾನ ಮಾಡುತ್ತಾನೆ; ಜ್ಞಾನಿ ಜೀವ ಹಾಗೂ ಬ್ರಹ್ಮ ಇವುಗಳನ್ನು ಕುರಿತು ಧ್ಯಾನಿಸುತ್ತಾನೆ. ಧ್ಯಾನದ ವಸ್ತು ಏನೇ ಆಗಿರಲಿ, ಇಬ್ಬರೂ ಕಾಲಕ್ರಮೇಣ ಒಂದೇ ಗುರಿಯನ್ನು ತಲುಪುತ್ತಾರೆ. ಧ್ಯಾನ ಗಾಢವಾಗುತ್ತ ಹೋದಂತೆ ದೇವರ ನಾಮ-ರೂಪಗಳು, ಹಾಗೂ ಜೀವ-ಬ್ರಹ್ಮ ಈ ಭಾವನೆಗಳು ಇಲ್ಲದಾಗುವುವು. ಇದು ಖಂಡಿತ. ಆಗ ಕೇವಲ ಮಾತಿನಿಂದ ವರ್ಣಿಸಲಾಗದ ಅನುಭವವೊಂದೇ ಉಳಿಯುವುದು.

*- ಸ್ವಾಮಿ ಅದ್ಭುತಾನಂದ*

# ಮಂತ್ರದೀಕ್ಷೆ, ನಾಮಜಪದ ಮಹಿಮೆ

**ಜೆ. ಶಶಿಧರ್**



ಧಾರ್ಮಿಕ ಪರಂಪರೆಗಳಲ್ಲೆಲ್ಲ ಬಹಳ ಮುಖ್ಯವಾದ ಆಧ್ಯಾತ್ಮಿಕ ಸಾಧನೆಯೇ ಜಪಸಾಧನೆ ಹಾಗೂ ದೀಕ್ಷೆ. ಹಿಂದೂಧರ್ಮದ ಎಲ್ಲ ಪಂಥಗಳಲ್ಲೂ ಇದನ್ನು ಅತ್ಯಂತ ಪ್ರಧಾನವೆಂದು ಪರಿಗಣಿಸಲಾಗಿದೆ. ಈ ವಿಷಯವನ್ನು ವಿವರಿಸಿರುವ ಲೇಖಕರು ಉತ್ತಮ ಬರಹಗಾರರು ಹಾಗೂ ಬೆಂಗಳೂರು ರಾಮಕೃಷ್ಣ ಮಠದ ಭಕ್ತರು.

ಆದಿಗುರು ಶಂಕರಾಚಾರ್ಯರು ಹೇಳುವಂತೆ ಪವಿತ್ರವಾದ ಮಾನವ ಜನ್ಮ, ಮುಮುಕ್ಷುತ್ವ ಮತ್ತು ಮಹಾಪುರುಷರ ಸಹವಾಸ ಈ ಮೂರೂ ದುರ್ಲಭ. ಇದೆಲ್ಲವನ್ನೂ ಒಂದೇ ಜನ್ಮದಲ್ಲಿ ಪಡೆದು ಕೃತಾರ್ಥರಾಗಬೇಕಾದರೆ ಅದಕ್ಕೆ ಭಗವಂತನೇ ಕೃಪೆ ಮಾಡಬೇಕು. ನಮ್ಮ ಪುರಾಣಗಳ ಪ್ರಕಾರ ಎಂಬತ್ತನಾಲ್ಕು ಲಕ್ಷ ಜೀವರಾಶಿಗಳ ಜನ್ಮವಾದ ಮೇಲೆ ಈ ಪವಿತ್ರವಾದ ಮಾನವ ಜನ್ಮ ದೊರೆಯುವುದು. ಇದಕ್ಕೆ ಋಷಿವಾಕ್ಯವೇ ಆಧಾರ. ಮಾನವ ಜನ್ಮ ಅತ್ಯಂತ ಪವಿತ್ರವಾದುದು. ಇದರ ಸಹಾಯದಿಂದ, ಗುರುವಿನ ಕೃಪೆಯಿಂದ ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡು ಹುಟ್ಟು-ಸಾವಿನ ಚಕ್ರದಿಂದ ಪಾರಾಗಬಹುದು. ಆದರೆ ಈ ಚಂಚಲವಾದ ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸುವುದು ಸುಲಭದ ಮಾತಲ್ಲ; ಕಷ್ಟಸಾಧ್ಯ. ಮಾನವನು ಇಂದ್ರಿಯಗಳ ದಾಸನಾಗಿರುವುದರಿಂದ ಯಾವಾಗಲೂ ಕೆಳಗಿನ ಸ್ತರಗಳಲ್ಲೇ ಇರುವ ಮನಸ್ಸನ್ನು ಮೇಲೆತ್ತಲು ಹಂಬಲಿಸಿದರೂ, ಪದೇ ಪದೇ ಬೀಳುತ್ತಲೇ ಇರುತ್ತಾನೆ. ಸುಖ ದುಃಖ, ಲಾಭ ನಷ್ಟ, ಮಾನ ಅಪಮಾನ ಇವುಗಳಿಂದ ಪಾಠ ಕಲಿಯುತ್ತಲೇ ಇರುತ್ತಾನೆ. ಆದರೆ ಅಪಾರವಾದ ಭಗವಂತನ ಕೃಪೆಯಿಂದ ಯಾವುದೋ ಒಂದು ಜನ್ಮದಲ್ಲಿ ದೃಢವಾಗಿ ಭಗವಂತನ ಅಸ್ತಿತ್ವದ ಬಗ್ಗೆ ನಂಬಿಕೆ ತಾಳಿ, ಸಾಧನೆಗೆ ತೊಡಗುತ್ತಾನೆ. ಮಾನವ ಜನ್ಮ ದೊರೆಯಿತು, ಭಗವಂತನಲ್ಲಿ ನಂಬಿಕೆ ಬಂದಾಯಿತು. ಆದರೆ ಸಕಾಲದಲ್ಲಿ ಗುರು ದೊರೆಯುವ ತನಕ ಕಾಯದೆ ವಿಧಿಯಿಲ್ಲ. ಇವನ ವ್ಯಾಕುಲತೆಯ ಪ್ರಾರ್ಥನೆಗೆ ಓಗೊಟ್ಟು ಭಗವಂತನೇ ಗುರುವಿನ ರೂಪದಲ್ಲಿ ಬಂದು ಮುಕ್ತಿಯ ಪಥ ತೋರುತ್ತಾನೆ. ಭಗವಂತನೇ ಮಹಾಪುರುಷರ ರೂಪದಲ್ಲಿ ಬಂದಿದ್ದರೂ ಸಾಮಾನ್ಯರಂತೆ ತಾನೂ ರೋಗ ರುಜಿನ, ಹಸಿವು ಬಾಯಾರಿಕೆ ಇವುಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಇರುವುದನ್ನು ಕಂಡ ಸಾಮಾನ್ಯರು ಅವನ ಮಹಿಮೆಯನ್ನು ಗುರುತಿಸಿ ಶರಣಾಗಲು ವಿಫಲರಾಗುತ್ತಾರೆ. ಆದರೆ ಗುರು ಯೋಗ್ಯ ಶಿಷ್ಯನಿಗೆ ಬೇಕಾದ ಎಲ್ಲಾ ಮಾರ್ಗದರ್ಶನ ನೀಡಿ, ಸಂಸಾರ ಸಾಗರವನ್ನು ದಾಟಿಸುವಲ್ಲಿ ಸಫಲನಾಗುತ್ತಾನೆ.

ಗುರು ಆದೇಶ ನೀಡಿದ ಹಾದಿಯಲ್ಲಿ ಸಾಧನೆಗೆ ತೊಡಗಲು ಸಾಧಕನಿಗೆ ಅನೇಕ ತೊಂದರೆಗಳು ಪದೇಪದೇ ಎದುರಾಗುತ್ತಿದ್ದರೂ, ಬಿಡದೆ ಸಾಧನೆಗೆ ತೊಡಗುತ್ತಾನೆ. ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಿದ್ದರು: ಯಾರಾದರೂ ಮರದ ಕೆಳಗೆ ನಿಂತು ಚಪ್ಪಾಳೆ ತಟ್ಟಿದರೆ ಆ ಮರದಲ್ಲಿರುವ ಪಕ್ಷಿಗಳು ಹಾರಿ ಹೋಗುವಂತೆ, ಯಾರೇ ಆಗಲಿ ಶ್ರದ್ಧೆಯಿಂದ ಭಗವಂತನ ನಾಮಸ್ಮರಣೆ ಮಾಡಿದ್ದೇ ಆದರೆ ಅವನಲ್ಲಿರುವ ಪಾಪಪ್ರವೃತ್ತಿಗಳು ನಾಶವಾಗುತ್ತಾ ಅವನು ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಪರಿಶುದ್ಧನಾಗಿ, ಮುಕ್ತಿ ಹೊಂದಲು ಶಕ್ತನಾಗುತ್ತಾನೆ.

ಕಲಿಯುಗದಲ್ಲಿ ಮಾನವ ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಸದಾಕಾಲ ಸಾಧನೆಗೆ ತೊಡಗಲು ಸಾಧ್ಯವಿಲ್ಲದ್ದರಿಂದ ಗುರು ಯುಗಕ್ಕೆ ತಕ್ಕಂತೆ ಸುಲಭವಾದ ಮತ್ತು ಪರಿಣಾಮಕಾರಿಯಾದ ಮಾರ್ಗವನ್ನು ಸೂಚಿಸುತ್ತಾನೆ. ಅದೇ ಮಂತ್ರದೀಕ್ಷೆಯ ಮೂಲಕ ಭಗವಂತನ ನಾಮಸ್ಮರಣೆ. ಇದು ಅತ್ಯಂತ ಪರಿಣಾಮಕಾರಿ. ಅನೇಕ ಸಾಧುಸಂತರು ಈ ಮೂಲಕ ಜೀವನವನ್ನು ಪಾವನವನ್ನಾಗಿಸಿಕೊಂಡ ಉದಾಹರಣೆಗಳು ಬೇಕಾದಷ್ಟಿವೆ. ಆದರೆ ಅದರಲ್ಲಿ ಪೂರ್ಣನಂಬಿಕೆ ಇಟ್ಟು ಗುರು ತಿಳಿಸಿದಂತೆ ಸಾಧನೆ ಮಾಡುವುದು ಬಹಳ ಮುಖ್ಯ.

ಅನೇಕ ಮಹಾಪುರುಷರ ಜೀವನವನ್ನು ಅಧ್ಯಯನ ಮಾಡಿದಾಗ ನಮಗೆ ಅರಿವಾಗುವಂತೆ, ಗುರು ತನ್ನ ಅಪಾರ ಕರುಣೆ

ಯಿಂದ ಶಿಷ್ಯನ ಆಧ್ಯಾತ್ಮಿಕ ಜವಾಬ್ದಾರಿಯನ್ನು ಹೊತ್ತು ಈ ಸಂಸಾರಸಾಗರವನ್ನು ದಾಟುವಲ್ಲಿ ಸಹಕರಿಸುತ್ತಾನೆ. ಇಂದು ಅನೇಕ ಮಠಗಳ ಗುರುಪರಂಪರೆ ಇಂದಿಗೂ ಮುಂದುವರೆದು ಅನೇಕ ಭಕ್ತರಿಗೆ ದಾರಿದೀಪವಾಗಿರುವುದೇ ಸಾಕ್ಷಿ. ಗುರು ಕೃಪೆ ಯಿಂದ ಏನನ್ನು ಬೇಕಾದರೂ ಸಾಧಿಸಬಹುದು – ಇದನ್ನು ಶ್ರೀರಾಮಕೃಷ್ಣ ಪರಮಹಂಸರ ನೇರ ಸಂನ್ಯಾಸೀ ಶಿಷ್ಯರ ಜೀವ ನದ ಮೂಲಕ ಅರಿಯಬಹುದು. ಆದರೆ ಶಿಷ್ಯನಾದವನು ಕಾಯಾ ವಾಚಾ ಮನಸಾ ಶರಣಾದಾಗ ಮಾತ್ರ ಗುರು ಕೃಪೆ ಅವನೆಡೆಗೆ ಹರಿದು ಬರುವುದು. ಆದರೆ ಗುರುವೇ ಸ್ವತಃ ಮನಸ್ಸು ಮಾಡಿದರೆ ಶಿಷ್ಯನ ಮುಕ್ತಿ ಕಟ್ಟಿಟ್ಟದ್ದು. ಅದಕ್ಕೆ ಉದಾಹರಣೆ ಸ್ವಾಮಿ ಅದ್ಭುತಾನಂದರ ಜೀವನ. ಇದಕ್ಕೆ ಜಾತಿ ಕುಲಗೋತ್ರಗಳ ಭೇದವಿಲ್ಲ. ಆದರೆ ಕೆಲವೊಮ್ಮೆ ಮಹಾಪುರುಷರೂ ಕೆಲವರಿಗೆ ಮಂತ್ರದೀಕ್ಷೆ ನೀಡಲು ನಿರಾಕರಿಸಿದ ನಿದರ್ಶನಗಳನ್ನು ಕಾಣ ಬಹುದು. ಏಕೆಂದರೆ ಮಂತ್ರದೀಕ್ಷೆ ನೀಡಿದ ಗುರುಗಳು ಶಿಷ್ಯನ ಪಾಪವನ್ನೂ ಸ್ವೀಕಾರ ಮಾಡಬೇಕಾಗುತ್ತದೆ. ಕೆಲವರು ಮಾಡಿರುವ ಪಾಪದ ರಾಶಿಯನ್ನು ಅಂತರ್ಯದಿಂದ ಅರಿತ ಗುರುಗಳು ಮಂತ್ರದೀಕ್ಷೆ ನೀಡಲು ನಿರಾಕರಿಸುತ್ತಾರೆ.

ಆದರೆ ಅಂತಹ ಶಿಷ್ಯರಿಗೂ ಮಂತ್ರದೀಕ್ಷೆ ನೀಡಿ ಆಶೀರ್ವದಿ ಸಿದ ಶ್ರೀಮಾತೆ ಶಾರದಾದೇವಿಯವರು ಸಾಕ್ಷಾತ್ ಜಗನ್ಮಾತೆಯೇ ಎಂಬುದರಲ್ಲಿ ಸಂದೇಹವಿಲ್ಲ. ಸಾಮಾನ್ಯವಾಗಿ ಮಂತ್ರದೀಕ್ಷೆ ಪಡೆದ ಮೇಲೆ ಪ್ರತಿದಿನ ಒಂದು ನಿಯಮಿತ ಸಮಯದಲ್ಲಿ ಗುರು ಹೇಳಿದ ಪ್ರಕಾರ ಜಪಿಸುತ್ತ, ಸಂಶಯ ಬಂದಾಗ ಪರಿಹರಿಸಿ ಕೊಳ್ಳುತ್ತಾ ಸಾಧನೆ ಮಾಡಬೇಕು. ಆಧ್ಯಾತ್ಮಿಕ ಪ್ರಗತಿ ಒಂದು ದಿನದಲ್ಲಿ ಸಾಧ್ಯವಿಲ್ಲ. ಅನೇಕ ವರ್ಷ ಎಡೆಬಿಡದೆ ನಾಮ ಜಪ ಮಾಡಿದರೂ ಯಾವುದೇ ಪ್ರಗತಿ ಕಾಣದೆ ಇರಬಹುದು. ಆದರೆ ಅದು ಎಂದಿಗೂ ವ್ಯರ್ಥ ವಾಗುವುದಿಲ್ಲ. ಆದರೆ ಪ್ರಗತಿ ಕಾಣಲಿಲ್ಲ ವೆಂದು ನಾಮಸ್ಮರಣೆ ನಿಲ್ಲಿಸಬಾರದು. ಶಿಷ್ಯನೊಬ್ಬ ಗುರುವನ್ನು ಕೇಳಿದ, ''ನಾಮಜಪವನ್ನು ಎಷ್ಟು ಬಾರಿ ಮಾಡಬೇಕು?'' ಅದಕ್ಕೆ ಉತ್ತರವಾಗಿ ಗುರು: ''ತೃಪ್ತಿಯಾಗುವಷ್ಟು. ನೀನು ಎಂದಾದರೂ ಊಟದ ತಟ್ಟೆಯ ಮುಂದೆ ಕುಳಿತು ಎಷ್ಟು ತುತ್ತು ತಿನ್ನಬೇಕು ಎಂದು ಯಾರನ್ನಾದರೂ ಕೇಳಿದ್ದೀಯಾ? ಇಲ್ಲ ತಾನೆ. ನಿನಗೆ ತೃಪ್ತಿಯಾಗುವಷ್ಟು ಸೇವಿಸುತ್ತೀಯಾ ಅಲ್ಲವೆ? ಅದೇ ನಿಯಮ ವನ್ನು ಇಲ್ಲೂ ಅಳವಡಿಸಿಕೊ'' ಎಂದರು. ನಾಮಸ್ಮರಣೆಗೆ ಮಿತಿ ಇಲ್ಲ. ತೃಪ್ತಿಯೇ ಮಿತಿ. ಶ್ರೀಕೃಷ್ಣ ಭಗವದ್ಗೀತೆಯಲ್ಲಿ ತಿಳಿಸು ತ್ತಾನೆ, 'ಯಾರು ಸದಾ ಕಾಲ ನನ್ನನ್ನು ಸ್ಮರಿಸುತ್ತಾರೋ ಅವರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ' ಎಂದು. ಇದೇ ನಮಗೆ ಆಧಾರ ಮತ್ತು ಭಗವಂತ ನೀಡಿರುವ ಆಶ್ವಾಸನೆ. ನಾಮ ಜಪ ಮಾಡುತ್ತಾ ಮಾಡುತ್ತಾ ವ್ಯಕ್ತಿಯ ಮಾನಸಿಕ ಸ್ಥಿತಿ ಯಾವ ಮಟ್ಟಕ್ಕೆ ಏರುತ್ತದೆ ಎಂಬುದಕ್ಕೆ ದಕ್ಷಿಣ ಭಾರತದಲ್ಲಿ ನಡೆದ ಒಂದು ಘಟನೆ ಮನನ ಯೋಗ್ಯ:

ಒಂದು ಆದರ್ಶ ಕುಟುಂಬವಿತ್ತು. ನೀತಿ ನಿಯಮಗಳ ಬೇಲಿ ಯಲ್ಲಿ ಸಂಸಾರ ನಡೆಯುತ್ತಿತ್ತು. ಇಂತಹ ಸಂಸಾರಕ್ಕೆ ಆಧುನಿ ಕತೆಯ ವ್ಯಾಮೋಹವಿರುವ ಒಬ್ಬಳು ಯುವತಿ ಸೊಸೆಯಾಗಿ ಬಂದಳು. ಅವಳಿಗೆ ಬಹಳ ಕಾಲ ಈ ಧರ್ಮದ ನೀತಿ ನಿಯಮ ಗಳನ್ನು ಅನುಸರಿಸಿ ಪಾಲಿಸುವ ಸಹನೆಯೂ ಇರಲಿಲ್ಲ,ಅದರಲ್ಲಿ ನಂಬಿಕೆಯೂ ಇರಲಿಲ್ಲ. ಒಂದು ದಿನ ಯಾರಿಗೂ ಹೇಳದೆ ಮನೆ ತೊರೆದು ಹೊರಟುಹೋದಳು. ಅವಳಿಗಾಗಿ ಎಲ್ಲಾ ಕಡೆ ಹುಡುಕ ಲಾಯಿತು. ಆದರೆ ಎಲ್ಲೂ ಆಕೆ ಕಂಡುಬರಲಿಲ್ಲ. ಇವಳೆಲ್ಲೋ ದೇಹತ್ಯಾಗ ಮಾಡಿರಬಹುದೆಂದು ಭಾವಿಸಿ ಎಲ್ಲರೂ ಸುಮ್ಮನಾ ದರು. ಅನೇಕ ವರ್ಷಗಳ ನಂತರ ಒಂದು ದಿನ ಒಬ್ಬಾಕೆ ಹೆಂಗಸು ಮನೆಯ ಬಳಿ ಬಹಳ ಹೊತ್ತಿನಿಂದ ನಿಂತಿರುವುದನ್ನು ಗಮನಿಸಿದ ಯಜಮಾನ ಅವಳನ್ನು ಕೇಳಿದ, ''ನಿನಗೇನಾದರೂ ತಿನ್ನಲು ನೀಡಲೆ? ಅಥವಾ ನಿನಗೆ ನಮ್ಮಿಂದೇನಾದರೂ ಸಹಾಯ ಬೇಕೆ?'' ಈ ಮಾತನ್ನು ಕೇಳಿ ಅತ್ಯಂತ ದುಃಖದಿಂದ ಆಕೆ ಹೇಳಿದಳು, ''ನನಗೇನೂ ಬೇಡ. ನಾನು ಏನನ್ನೂ ಸ್ವೀಕರಿಸಲು ಯೋಗ್ಯಳಲ್ಲ. ನಾನು ಸುಮ್ಮನೆ ನಿಮ್ಮನ್ನು ನೋಡಿ ಹೋಗೋಣವೆಂದು ಬಂದಿ ದ್ದೇನೆ.'' ಈ ಮಾತನ್ನು ಕೇಳಿದ ಯಜಮಾನನಿಗೆ ಅನುಮಾನ ಬಂತು. ಆಕೆಯನ್ನು ದಿಟ್ಟಿಸಿ ನೋಡಿದ ಕೂಡಲೆ ಅವನ ಮುಖ ದಲ್ಲಿ ಮಂದಹಾಸ ಮಿನುಗಿತು. ಅವನು ಹೇಳಿದ, ''ನೀನು ನನ್ನ ಪತ್ನಿ. ಇಷ್ಟು ದಿನ ಎಲ್ಲಿದ್ದೆ? ಒಳಗೆ ಬಾ'' ಎಂದ. ಇವನ ಮಾತನ್ನು ಕೇಳಿದ ಮನೆಯವರೆಲ್ಲರೂ ಬಂದರು. ಸೊಸೆಯ ಈ ದುರವಸ್ಥೆ ಯನ್ನು ಕಂಡು ಕನಿಕರಪಟ್ಟರು. ಆಗ ಗಂಡ ಹೇಳಿದ, ''ನೋಡು ನೀನು ಏನೇ ಅನಾಚಾರ ಮಾಡಿದ್ದರೂ ನಾನು ಕ್ಷಮಿಸುತ್ತೇನೆ. ಆದರೆ ನೀನು ಒಳಗೆ ಬರುವ ಮೊದಲು ಮೂರು ಬಾರಿ ನಿನ್ನ ಇಷ್ಟದೇವತೆಯ ಹೆಸರು ಹೇಳಿ ಒಳಗೆ ಬರಬೇಕು ಅಷ್ಟೆ. ಆಗಲೇ ನೀನು ಮೊದಲಿನಂತೆ ಪರಿಶುದ್ಧಳಾಗುವೆ'' ಎಂದ. ಇದಕ್ಕೆ ಉತ್ತರ ವಾಗಿ ಆ ಹೆಂಗಸು, ''ನೋಡಿ, ನಾನು ನಿಮ್ಮ ಸಂಸಾರದಲ್ಲಿರಲು ಯೋಗ್ಯಳಲ್ಲ. ನಾನು ನನ್ನ ಜೀವನ ಹಾಳು ಮಾಡಿಕೊಂಡಿದ್ದೇನೆ. ನಿಮಗೆ ಅಪಕೀರ್ತಿ ತಂದಿದ್ದೇನೆ. ನಾನು ಒಳಗೆ ಬರಲಾರೆ'' ಎಂದಳು. ಈ ಮಾತನ್ನು ಕೇಳಿದ ಇವಳ ಪತಿಯ ತಂದೆ ಹೇಳಿ ದರು, ''ನೋಡಮ್ಮ, ಯಾವುದೋ ಕೆಟ್ಟಗಳಿಗೆ ನಿನ್ನನ್ನು ಈ ರೀತಿ ಮಾಡಿದೆ. ನೀನೇನೂ ಹೆದರಬೇಡ. ನೀನು ಒಂದೇ ಒಂದು ಬಾರಿ ನಿನ್ನ ಇಷ್ಟದೇವತೆಯ ಹೆಸರನ್ನು ಸ್ಮರಿಸಿ ಒಳಗೆ ಬಾ. ನಾನು ನಿನ್ನನ್ನು ಮೊದಲಿನಂತೆ ನನ್ನ ಸೊಸೆಯಾಗಿ ಸ್ವೀಕರಿಸಿ ಅತ್ಯಂತ ಪ್ರೀತಿಯಿಂದ ನಿನ್ನನ್ನು ನೋಡಿಕೊಳ್ಳುವ ವ್ಯವಸ್ಥೆ ಮಾಡುತ್ತೇನೆ.'' ಈ ಮಾತನ್ನು ಕೇಳಿದ ಸೊಸೆಯ ಮನಸ್ಸು ಬದಲಾಯಿತು. 'ಭಗವಂತನ ನಾಮಸ್ಮರಣೆಗೆ ಇಷ್ಟೊಂದು ಶಕ್ತಿ ಇದೆಯೆ? ಇನ್ನು ನಾನು ಜೀವನವನ್ನು ವ್ಯರ್ಥಗೊಳಿಸಿಕೊಳ್ಳುವುದಿಲ್ಲ, ಪರಿಶುದ್ಧ ಜೀವನ ನಡೆಸುತ್ತೇನೆ' ಎಂದು ತೀರ್ಮಾನಿಸಿ ಗುರುಗಳಿಂದ ಆಶೀ ರ್ವಾದ ಪಡೆದು ಭಗವಂತನ ನಾಮಜಪವನ್ನು ಶ್ರದ್ಧೆಯಿಂದ ಜಪಿಸುತ್ತ, ಪರಿಶುದ್ಧ ಜೀವನ ನಡೆಸಿ, ಅನೇಕರಿಗೆ ದಾರಿದೀಪ



ವಾದಳು. ಅವಳಿಗೆ ತನ್ನ ಪತಿ ಮತ್ತು ಪತಿಯ ತಂದೆಯಿಂದ ಶಕ್ತಿ ದೊರೆಯಿತು. ನಾಮಜಪದ ಪ್ರಭಾವದಿಂದ ವ್ಯಕ್ತಿಯ ಮಾನಸಿಕ ಸ್ಥಿತಿ ಉನ್ನತ ಮಟ್ಟಕ್ಕೆ ಏರಲು ಸಾಧ್ಯ ಎಂಬುದಕ್ಕೆ ಇದೊಂದು ಉತ್ತಮ ಉದಾಹರಣೆ. ಈ ಘಟನೆಯನ್ನು ಹಿರಿಯ ಸಾಧುಗಳೊಬ್ಬರು ತಮ್ಮ ಉಪನ್ಯಾಸದಲ್ಲಿ ವಿವರಿಸಿದರು. ಇದನ್ನು ಕೇಳಿ ಅನೇಕ ಭಕ್ತರು ತಮ್ಮ ಇಷ್ಟದೇವತೆಯ ನಾಮಜಪ ಮಾಡಲು ವಿಶೇಷ ಸ್ಫೂರ್ತಿ ಪಡೆದರು.

ಆದಿಗುರು ಶಂಕರಾಚಾರ್ಯರು ಹಿಮಾಲಯದಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿ ಒಬ್ಬ ವೃದ್ಧ ವ್ಯಾಕರಣ ಕಲಿಯುತ್ತಿರುವುದನ್ನು ಕಂಡು ಹೇಳುತ್ತಾರೆ, ''ಈ ಇಳಿವಯಸ್ಸಿನಲ್ಲಿ ವ್ಯಾಕರಣ ಕಲಿಯುವುದನ್ನು ಬಿಟ್ಟು ಗೋವಿಂದನ ಸ್ಮರಣೆ ಮಾಡು. ಸಾವು ಯಾವಾಗ ಸಮೀಪಿಸುವುದೋ ಬಲ್ಲವರಾರು? ಆಗ ವ್ಯಾಕರಣ ನಿನಗೆ ಯಾವುದೇ ಸಹಾಯಕ್ಕೆ ಬರುವುದಿಲ್ಲ. ಆದ್ದರಿಂದ ಗೋವಿಂದನ ಸ್ಮರಣೆ ಮಾಡು.''

ಕೃಷ್ಣದೇವರಾಯನ ಕಾಲದಲ್ಲಿ ಒಮ್ಮೆ ಭೀಕರ ಬರಗಾಲ ಬಂದಿತ್ತು. ಪರಿಹಾರ ಕಾಣದೆ ರಾಜ ಶ್ರೀವಿದ್ಯಾರಣ್ಯರ ಬಳಿ ಮೊರೆ ಹೋದ. ಜನರ ಉದ್ಧಾರಕ್ಕಾಗಿ ಗುರುಗಳು ಒಂದು ಕೋಟಿ ಗಾಯತ್ರೀ ಮಂತ್ರ ಜಪಿಸಿದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಇದಕ್ಕೆ ಕಾರಣ ತಿಳಿಯಲು ಭಗವಂತನನ್ನು ಪ್ರಾರ್ಥಿಸಿದಾಗ ಒಂದು ಅಶರೀರವಾಣಿ ಕೇಳಿಸಿತು, ''ನೀವು ಇದುವರೆಗೂ ಮಾಡಿರುವ ಜಪ ನಿಮ್ಮ ಹಿಂದಿನ ಜನ್ಮ ಗಳಲ್ಲಿ ಮಾಡಿರುವ ಕರ್ಮಗಳಿಗೆ ಸರಿಯಾಯಿತು. ನೀವು ಮತ್ತೆ ಜಪ ಮಾಡುವುದರಿಂದ ರಾಜ್ಯದ ಬರಗಾಲಕ್ಕೆ ಪರಿಹಾರ ಸಾಧ್ಯ'' ಎಂದು. ಆಗ ವಿದ್ಯಾರಣ್ಯರು ಮತ್ತೆ ಒಂದು ಕೋಟಿ ಜಪ ಮಾಡಿದಾಗ ಸುವರ್ಣವೃಷ್ಟಿಯಾಯಿತು, ಎಲ್ಲರೂ ಸುಖ ಶಾಂತಿಗಳಿಂದ ಜೀವಿಸುವಂತಾಯಿತು. ನಾಮಜಪದ ಮಹಿಮೆಯನ್ನು ಎಲ್ಲರೂ ಅರಿಯುವಂತಾಯಿತು.

ಭಗವಂತ ಯಾರಿಗೆ ಯಾವಾಗ ಕೃಪೆ ಮಾಡುತ್ತಾನೋ ಬಲ್ಲವರಾರು ? ಒಬ್ಬ ದರೋಡೆಕೋರ ರಾಮನಾಮ ಜಪದ ಪ್ರಭಾವದಿಂದ ಋಷಿಯಾದ ಘಟನೆ ಎಲ್ಲರೂ ತಿಳಿದಿರುವುದೇ ಆಗಿದೆ. ಮಾನವ ಇಂದ್ರಿಯಗಳ ದಾಸನಾಗಿರುವುದರಿಂದ ಶರೀರ ತ್ಯಾಗ ಮಾಡುವ ತನಕ ಯಾವುದಾದರೂ ಒಂದು ಸಮಸ್ಯೆಯಿಂದ ಬಳಲುತ್ತಲೇ ಇರುತ್ತಾನೆ. ಇದರಿಂದ ಪಾರಾಗಲು ಇರುವ ಸುಲಭ ಮಾರ್ಗವೇ ನಾಮಜಪ. ಇಂದ್ರಿಯಗಳ ಈಶನಾಗಿರುವ ಭಗವಂತನನ್ನು ನಾಮಜಪದ ಮೂಲಕ, ಪರಿಶುದ್ಧ ಮನಸ್ಸಿನಿಂದ, ಬೇಡುವುದೊಂದೇ ಎಲ್ಲರಿಗೂ ಇರುವ ಸುಲಭವಾದ ಮಾರ್ಗ. ಶಿಷ್ಯನ ಆಧ್ಯಾತ್ಮಿಕ ಜವಾಬ್ದಾರಿ ಹೊತ್ತ ಗುರು ಮಂತ್ರದೀಕ್ಷೆಯ ಮೂಲಕ ಶಿಷ್ಯನ ಪಾಪವನ್ನು ಸ್ವೀಕರಿಸಿ ಅವನನ್ನು ಉದ್ಧರಿಸುತ್ತಾನೆ. ಇದರ ಪ್ರಭಾವದಿಂದ ಕ್ರಮೇಣ ಮನಸ್ಸು ಪರಿಶುದ್ಧವಾಗಿ, ಭಗವಂತನ ಮೇಲಿನ ಶ್ರದ್ಧೆ, ನಂಬಿಕೆ ದ್ವಿಗುಣವಾಗುತ್ತದೆ; ಜೀವನ ಪಾವನವಾಗುತ್ತದೆ.

ಇಂದು ಅನೇಕ ಮಠಗಳಲ್ಲಿ ಗುರುಪರಂಪರೆಯಿಂದ ಬಂದ ಮಂತ್ರವನ್ನು ಆಸಕ್ತರಿಗೆ ನೀಡುವ ಪದ್ಧತಿ ಮುಂದುವರೆಯುತ್ತಲೇ ಇದೆ. ಇದರಿಂದ ಅನೇಕ ಭಕ್ತರು ಪ್ರಯೋಜನ ಪಡೆದು ಕಾಡಿನಲ್ಲಿ ಅರಳಿ ಸುಗಂಧ ಸೂಸುವ ಪುಷ್ಪದಂತೆ ಜೀವನ ನಡೆಸಿ, ಪಾವನರಾಗಿದ್ದಾರೆ. ಈ ದುರ್ಲಭವಾದ ಮಾನವ ಜನ್ಮವನ್ನು ಮಂತ್ರ ದೀಕ್ಷೆಯ ಮೂಲಕ ಪಡೆದ ಭಗವಂತನ ನಾಮಜಪದ ಮೂಲಕ ಸಾರ್ಥಕಗೊಳಿಸಿಕೊಂಡು, ಇತರರ ಏಳಿಗೆಗಾಗಿ ಯಾವುದೇ ಕಪಟಾಚರಣೆ ಇಲ್ಲದೆ ಶ್ರಮಿಸೋಣ. ಇದಕ್ಕೆ ಆ ಸರ್ವಶಕ್ತನಾದ ಭಗವಂತನು ಆಶೀರ್ವದಿಸಲಿ ಎಂದು ಪ್ರಾರ್ಥಿಸೋಣ. ಪ್ರಾರ್ಥನೆಯಿಂದ ಪರಿವರ್ತನೆ ಸಾಧ್ಯ ಎಂಬುದಕ್ಕೆ ಅನೇಕ ನಿದರ್ಶನಗಳು ದೊರೆತಿವೆ. ಇದನ್ನು ದೃಢವಾಗಿ ನಂಬಿ, ಗುರುವಿನ ಮಾರ್ಗದರ್ಶನದಲ್ಲಿ ಜೀವನ ನಡೆಸಿ ಕೃತಾರ್ಥರಾಗೋಣ.

## ಶ್ರೀರಾಮಕೃಷ್ಣರು ಸಾಕ್ಷಾತ್ ಶಿವನೇ

ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲಿ ಒಬ್ಬರಾದ ಸ್ವಾಮಿ ಶಿವಾನಂದರು ಕಾಶಿಯಲ್ಲಿ ತಮಗಾದ ವಿಶೇಷ ದರ್ಶನವನ್ನು ಕುರಿತು ಹೀಗೆ ಹೇಳುತ್ತಾರೆ: ''ನಿನ್ನೆ ರಾತ್ರಿ ನನಗೆ ಒಂದು ವಿಚಿತ್ರ ಅನುಭವವಾಯ್ತು . ಮಧ್ಯರಾತ್ರಿ ; ಮಲಗಿದ್ದೆ; ಹಠಾತ್ತನೆ ನೋಡುತ್ತೇನೆ, ಒಬ್ಬ ಶ್ವೇತಕಾಯ ಪುರುಷ, ಜಟಾಜೂಟಧಾರಿ, ತ್ರಿನಯನ, ನನ್ನ ಹತ್ತಿರವೆ ಬಂದು ನಿಂತಿದ್ದಾನೆ! ಆತನ ದಿವ್ಯ ಕಾಂತಿಯಿಂದ ನಾಲ್ಕೂ ದಿಕ್ಕು ಅವಲೋಕಿತವಾಗಿಬಿಟ್ಟಿತ್ತು . ಆಹಾ, ಎಂಥ ಸುಂದರ ಕಮನೀಯ ಮೂರ್ತಿ; ಕಣ್ಣುಗಳಲ್ಲಿ ಎಂತಹ ಕರುಣೆ! ಆತನನ್ನು ನೋಡಿದ ಮಾತ್ರದಿಂದಲೆ ಒಳಗಿದ್ದ ಮಹಾವಾಯು (ಆಧ್ಯಾತ್ಮಿಕ ಕುಂಡಲಿನೀ ಶಕ್ತಿ) ಒಂದೆ ಏಟಿಗೆ ಗರಗರ ಶಬ್ದ ಮಾಡುತ್ತಾ ಊರ್ಧ್ವದ ಕಡೆಗೆ ಏರತೊಡಗಿತು; ಕ್ರಮವಾಗಿ ಧ್ಯಾನಸ್ಥನಾದೆ: ಸಮಸ್ತ ಚೈತನ್ಯವೂ ಸ್ತಬ್ಧವಾಯಿತು; ಅಃ ಎಂಥ ಆನಂದಾನುಭವ! ಆಗ ನೋಡುತ್ತೇನೆ, ಆ ರೂಪ ಮೆಲ್ಲಮೆಲ್ಲನೆ ಅಂತರ್ಧಾನವಾಗಿ, ಅದರ ಸ್ಥಾನದಲ್ಲಿ ಶ್ರೀ ಗುರುಮಹಾರಾಜ್ ಮಂದಹಾಸ ಬೀರುತ್ತಾ ನಿಂತಿದ್ದುದನ್ನು ಕಂಡೆ. ನನ್ನ ಕಡೆಗೆ ಕೈತೋರಿಸುತ್ತಾ ಅವರು ಹೇಳಿದರು: 'ನೀನಿನ್ನೂ ಇರಬೇಕಾಗಿದೆ, ಇನ್ನೂ ಸ್ವಲ್ಪ ಕೆಲಸ ಬಾಕಿ ಇದೆ.' ಠಾಕೂರರು ಹೀಗೆ ಹೇಳಿದೊಡನೆಯೆ ಮನಸ್ಸು ಕೆಳಕ್ಕೆ ಇಳಿಯತೊಡಗಿತು. ಮತ್ತೆ ಶ್ವಾಸಕ್ರಿಯೆ ಪ್ರಾರಂಭವಾಗಿ ನನ್ನ ದೇಹವೂ ಉಸಿರಾಡತೊಡಗಿತು. ಎಲ್ಲವೂ ಶ್ರೀ ಗುರು ಇಚ್ಛೆ. ನಾನಂತೂ ಮಹದಾನಂದದಲ್ಲಿದ್ದೆ! ಮತ್ತಾರೂ ಅಲ್ಲ, ಸಾಕ್ಷಾತ್ ಕಾಶೀ ವಿಶ್ವನಾಥ!'' ಆಗ ಸಂನ್ಯಾಸಿಯೊಬ್ಬರು ಪ್ರಶ್ನಿಸುತ್ತಾರೆ, ''ತಮಗೆ ದರ್ಶನವಾದದ್ದು ಸ್ವಪ್ನದಲ್ಲಿಯೆ?'' ಶಿವಾನಂದರು: ''ಇಲ್ಲ, ಇಲ್ಲ; ಚೆನ್ನಾಗಿ ಎಚ್ಚರವಾಗಿದ್ದಾಗಲೆ.''

*('ಗುರುವಿನೊಡನೆ ದೇವರಡಿಗೆ', ಕುವೆಂಪು, ಪು.೨೮೨, ಮೈಸೂರು ಶ್ರೀರಾಮಕೃಷ್ಣ ಆಶ್ರಮ, ೨೦೧೦ರ ಪ್ರಕಟಣೆ)*




**ಡಾ. ಬಿ.ಎಸ್.ಎನ್. ಪ್ರಸಾದರ**

# ಭಾರತೀಯ ಧಾರ್ಮಿಕ ಸಾಹಿತ್ಯದ ವರ್ಗೀಕೃತ ನಿರೂಪಣೆ

*ಕೃತಿ*
**ಭಾರತೀಯ ಧಾರ್ಮಿಕ ಸಾಹಿತ್ಯದ ವರ್ಗೀಕೃತ ನಿರೂಪಣೆ**
*ಲೇಖಕರು*
**ಡಾ. ಬಿ.ಎಸ್.ಎನ್. ಪ್ರಸಾದ್**
**ಎಂ.ಎನ್. ಜಗದೀಶ್**
*ಪ್ರಕಾಶಕರು*
**ಭಾನು ಪ್ರಕಾಶನ, ಮೈಸೂರು**

*ಪ್ರತಿಗಳು ಸಿಗುವ ಸ್ಥಳ*
**ಭಾರತೀ ಪ್ರಕಾಶನ,**
**# 279, 13ನೇ ಮುಖ್ಯರಸ್ತೆ ,**
**3ನೇ ಅಡ್ಡರಸ್ತೆ , ಸರಸ್ವತಿಪುರಂ,**
**ಮೈಸೂರು-570 009**
ಫೋನ್: 0821-2543941

*ಪುಟಗಳು* : **214**
*ಬೆಲೆ* : **220/-**

ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಇಲ್ಲ, ಮಹಾನ್ ಗ್ರಂಥಗಳನ್ನು ರಚಿಸಿದವರು ತಮ್ಮ ಹೆಸರನ್ನಾಗಲಿ, ಕಾಲವನ್ನಾಗಲಿ ಹೇಳುವುದಿಲ್ಲ ಎಂಬ ಮಾತು ಇದೆ. ವಿಚಾರ ಮುಖ್ಯ, ಹೇಳಿದವನಾಗಲಿ ಅವನ ಕಾಲವಾಗಲಿ ಮುಖ್ಯವಲ್ಲ ಎನ್ನುವುದು ಭಾರತೀಯರ ಅನಿಸಿಕೆ. ಕವಿಗಳ ಕಾಲ ಕುರಿತ ಚರ್ಚೆಯು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮುಖ್ಯ ಭಾಗವೇ ಸರಿ. ಧಾರ್ಮಿಕ ಸಾಹಿತ್ಯ ಇಡೀ ದೇಶದ್ದಾಗಿರುವುದರಿಂದ ಅತಿ ವಿಶಾಲವಾಗಿದ್ದು, ವೇದ ಉಪನಿಷತ್ತುಗಳು, ಮತ ಪಂಥಗಳು, ವಿವಿಧ ಕ್ರಿಯಾವಿಧಿಗಳು, ಪುರಾಣಗಳು, ದರ್ಶನ ಶಾಸ್ತ್ರಗಳನ್ನು ಒಳಗೊಂಡಿದೆ. ಇವುಗಳಲ್ಲಿ ಏನಿದೆ ಎಂದು ಪರಿಚಯ ಮಾಡಿಕೊಳ್ಳುವ ಕುತೂಹಲ ಅನೇಕರಿಗೆ ಇರುತ್ತದೆ. ಇವರಿಗೆ ಆಯಾ ಮತಪಂಥಗಳ ಗುರುಗಳು ಮಾರ್ಗದರ್ಶನ ಮಾಡಬಹುದಾಗಿದ್ದರೂ, ಆ ಅಧ್ಯಯನ ಆಯಾ ಮತಪಂಥಗಳಿಗೆ ಮಾತ್ರ ಸೀಮಿತವಾದೀತು. ನಿಷ್ಪಕ್ಷಪಾತವೂ, ವಿಶಾಲವೂ ಆದ ಎಲ್ಲವನ್ನೂ, ಎಲ್ಲರನ್ನೂ ಒಳಗೊಳ್ಳುವ ಸಮನ್ವಯ ದೃಷ್ಟಿ ಸಾಧ್ಯವಾಗದು. ಈ ಕೊರತೆಯನ್ನು ಈಡೇರಿಸುವ ಸಣ್ಣ ಪ್ರಯತ್ನ ಡಾ. ಬಿ.ಎಸ್.ಎನ್. ಪ್ರಸಾದರಿಂದ ಆಗಿದೆ.

ಪಶ್ಚಿಮದಲ್ಲಿ ಇತಿಹಾಸದ ಸತ್ಯವನ್ನು ಕುರಿತ ಅನ್ವೇಷಣೆಗೆ ಮಹತ್ವ ಬರಲು ಗ್ರೀಕರು, ರೋಮನ್ನರು ಕಾರಣ ಎಂದು ಪ್ರೊ. ಎಸ್.ಎನ್.ಬಾಲಗಂಗಾಧರ ಅವರು ಹೇಳುತ್ತಾರೆ. ಜೀವನವು ಸತ್ಯವನ್ನಾಧರಿಸಿರಬೇಕು, ಸುಳ್ಳು ಹೇಳುವವರನ್ನು ಗಡೀಪಾರು ಮಾಡಬೇಕು ಎಂದು ಪ್ಲೇಟೋ ಹೇಳಿದನು. ಅವನನ್ನು ಅನುಸರಿಸಿ, ರೋಮನ್ನರೂ ಹಿಸ್ಟರಿ ಎಂಬುದು ಮಾತ್ರವೇ ಹಿಂದಿನ ಕಾಲವನ್ನು ಕುರಿತು ನಂಬಿಕೊಳ್ಳಬಹುದಾದದ್ದು ಎಂದು ಭಾವಿಸಿ, ತಮ್ಮ ಗತಕಾಲದ ಅಧಿಕೃತ ಹಿಸ್ಟರಿಗಳನ್ನು ಬರೆದರು. ಅವರ ಆಳ್ವಿಕೆಯಲ್ಲಿದ್ದ ಯಹೂದಿಗಳು, ಕ್ರೈಸ್ತರು ರೋಮನ್ನರ ದೇವತೆಗಳನ್ನು ಪೂಜಿಸಿದರೆ ತಮ್ಮ ದೇವರನ್ನು ವಿರೋಧಿಸಿದಂತಾಗಿ, ಪಾಪವಾಗುತ್ತದೆ - ಇದು ತಮ್ಮ ಧರ್ಮದ ಕಟ್ಟುಪಾಡು ಎಂದು ರೋಮನ್ನರ ಸಾಮಾಜಿಕ ಉತ್ಸವಗಳನ್ನು ಬಹಿಷ್ಕರಿಸಿದರು. ತಮಗೆ ಒಪ್ಪಿಗೆಯಾಗದಿದ್ದರೂ, ಪೂರ್ವಜರಿಂದ ಬಂದ ಇತರ ಸಂಪ್ರದಾಯಗಳನ್ನು ಗೌರವಿಸುವುದು ರೋಮನ್ನರ ಉದಾರತೆ. ಇದಕ್ಕಾಗಿ ಯಹೂದ್ಯರು ತಮ್ಮ ಹಳೆಯ ಒಡಂಬಡಿಕೆಯನ್ನು ತೋರಿಸಿದಾಗ, ಅವರನ್ನು ಸಹಿಸಿಕೊಳ್ಳಲಾಯಿತು. ಕ್ರೈಸ್ತರೂ ತಮ್ಮದು ರಿಲಿಜನ್ನು, ಹಿಂದಿನವರ ಅಂಧಾನುಕರಣೆಯಲ್ಲ, ಸತ್ಯಘಟನೆಗಳನ್ನು ಆಧರಿಸಿದ್ದು ಎಂದು ಸಾಬೀತು ಪಡಿಸಲು ಹೊಸ ಒಡಂಬಡಿಕೆಯನ್ನೂ, ತಮ್ಮ ಹಿಸ್ಟರಿಯನ್ನೂ ರಚಿಸಿದರು. ಮುಂದೆ ಪ್ರಾಟೆಸ್ಟಂಟರು ಹಿಸ್ಟರಿಯ ಸತ್ಯವನ್ನು ನೈಜ ಮಾನವ ವ್ಯಕ್ತಿ ಹಾಗೂ ಘಟನೆಗಳ ನೆಲೆಯಲ್ಲಿ ನಿಲ್ಲಿಸಿದರು. ಈ ಒತ್ತಡದಿಂದಲೇ ನಮ್ಮ ವಿದ್ವಾಂಸರೂ ರಾಮಾಯಣ ಮಹಾಭಾರತಗಳು ನಿಜವಾಗಿ ನಡೆದವು; ರಾಮ, ಕೃಷ್ಣರು ಐತಿಹಾಸಿಕ ವ್ಯಕ್ತಿಗಳು ಎಂದು ನಿರೂಪಿಸಲು ಪ್ರಯಾಸಪಡುತ್ತಿರುವುದು.

ಈ ಹಿನ್ನೆಲೆಯಲ್ಲಿ, ವಿದೇಶಕ್ಕೆ ಹೋದ ಭಾರತೀಯರಿಗೆ ತಮ್ಮ ಪ್ರಾಚೀನ ಧರ್ಮ, ತತ್ತ್ವಶಾಸ್ತ್ರಗಳನ್ನು ಅಲ್ಲಿನ ಸಾಮಾನ್ಯರ ಕುತೂಹಲ ತಣಿಸಲು ಸ್ಥೂಲವಾಗಿ ಪರಿಚಯಿಸುವ ಅಗತ್ಯ ಬೀಳುತ್ತದೆ. ಅಮೆರಿಕದಲ್ಲಿ ನೆಲೆಸಿದ್ದ ಪ್ರೊ. ಪ್ರಸಾದರ ಸ್ನೇಹಿತರೊಬ್ಬರು ಈ ಸಮಸ್ಯೆಯನ್ನು ವಿವರಿಸಿದಾಗ, ಅವರ ಒತ್ತಾಸೆಯ ಮೇರೆಗೆ ಈ ಪುಸ್ತಕವನ್ನು ರಚಿಸಲಾಗಿದೆ. ಧಾರ್ಮಿಕ ಗ್ರಂಥಗಳಲ್ಲಿ ಕಂಡುಬರುವಂತೆ ತತ್ತ್ವ ಪಕ್ಷಪಾತ, ತಮ್ಮ ಆಚಾರ್ಯರ ಸಿದ್ಧಾಂತವೇ ಸರಿ ಎನ್ನುವ, ಇತರರದನ್ನು ಖಂಡಿಸುವ ಪ್ರವೃತ್ತಿ ಇಲ್ಲಿ ಇಲ್ಲ. ವೇದಗಳಿಂದ ದರ್ಶನಗಳ

ವರೆಗೆ ಸಮಗ್ರ ವಿಷಯವನ್ನು ಸರಳಗೊಳಿಸಿ, ರೇಖಾನಕ್ಷೆಗಳನ್ನು ಬಳಸಿ ನೇರವಾಗಿ ನಿರೂಪಿಸುವುದು ಪ್ರೊ.ಪ್ರಸಾದರ ವಿಧಾನ. ಅವರು ಮೊದಲು ರೂಪಿಸಿಕೊಂಡದ್ದು ಪುಸ್ತಕದ ಮೊದಲ ಪುಟ ದಲ್ಲಿ ಕೊಟ್ಟಿರುವ **ಭಾರತೀಯ ಧಾರ್ಮಿಕ ಸಾಹಿತ್ಯದ ವರ್ಗೀಕರಣ** ಎಂಬ ರೇಖಾನಕ್ಷೆಯನ್ನು. ಇದನ್ನು ತಯಾರಿಸಿಕೊಳ್ಳಲು ಅವರಿಗೆ ಸುಮಾರು ಐದು ವರ್ಷ ಹಿಡಿಯಿತಂತೆ. ಅಧ್ಯಯನಕ್ಕೆ ತಮ್ಮದೇ ಆದ ಯೋಜನೆ ತಯಾರಿಸಿಕೊಂಡ ಮೇಲೆ, ವಿವಿಧ ಮೂಲಗಳಿಂದ ಪರಿಚಯಕ್ಕೆ ಬೇಕಾದ ಸಾಮಗ್ರಿಯನ್ನು ಸಂಗ್ರಹ ಮಾಡುವುದಕ್ಕೇ ಅನೇಕ ವರ್ಷಗಳಾದುವು. ಅದನ್ನು ಸರಳ ಗೊಳಿಸಿ, ಸುಲಭವಾಗಿ ಓದಿಕೊಳ್ಳುವಂತೆ ಈ ಗ್ರಂಥವನ್ನು ರಚಿಸಿದ್ದಾರೆ.

ಭಾರತೀಯ ಚಿಂತನೆಯನ್ನು ವೈದಿಕ, ಅವೈದಿಕ ಎಂದು ಎರಡು ಭಾಗ ಮಾಡಿಕೊಂಡಿದ್ದಾರೆ. ವೈದಿಕ ಸಾಹಿತ್ಯದಲ್ಲಿ ಶ್ರುತಿ ಸಾಹಿತ್ಯ, ಸ್ಮೃತಿ ಸಾಹಿತ್ಯ ಎಂಬ ಎರಡು ಕವಲುಗಳು. ಶ್ರುತಿ ಸಾಹಿತ್ಯವನ್ನು ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳ ಶೀರ್ಷಿಕೆಯಡಿ ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡಲಾಗಿದೆ. ಸ್ಮೃತಿ ಸಾಹಿತ್ಯವನ್ನು ವೇದಾಂಗಗಳು, ಪುರಾಣ ಸಾಹಿತ್ಯ, ಷಡ್ದರ್ಶನಗಳು, ಪ್ರಸ್ಥಾನತ್ರಯ, ವೇದಾಂತ ದರ್ಶನಗಳು ಎಂದು ವರ್ಗೀಕರಿಸಿ, ಸ್ಥೂಲವಾಗಿ ಪರಿಚಯಿಸಲಾಗಿದೆ. ಇದೇ ನೂರು ಪುಟಗಳಷ್ಟು ವಿಸ್ತಾರವಾಗಿದ್ದು, ಪುಸ್ತಕದ ಮುಖ್ಯ ಭಾಗವಾಗಿದೆ. ಧಾರ್ಮಿಕ ಚಿಂತನೆಯ ಇನ್ನೊಂದು ಕವಲಾದ ಅವೈದಿಕವನ್ನು ಆಸ್ತಿಕ ಆಗಮ ಸಾಹಿತ್ಯ, ಅವೈದಿಕ ನಾಸ್ತಿಕ ದರ್ಶನಗಳು ಎಂದು ವಿಂಗಡಿಸಿ, ಪರಿಚಯಿಸಲಾಗಿದೆ. ಈಗ ಕಾಣುತ್ತಿರುವ ದೇವಸ್ಥಾನ ಕೇಂದ್ರಿತ, ಬಾಹ್ಯ ಆಚರಣೆ ಪ್ರಧಾನವಾದ ಹಿಂದೂಧರ್ಮದ ಕ್ರಿಯಾವಿಧಿಗಳಿಗೆ ಶೈವ, ವೈಷ್ಣವ ಹಾಗೂ ಶಾಕ್ತ ಆಗಮಗಳು ಆಧಾರ. ವೈದಿಕರನ್ನು ಎದುರಿಸಿ ನಿಂತ ಬೌದ್ಧ, ಜೈನ ಮತ್ತು ಚಾರ್ವಾಕರ ಚಿಂತನೆ ಅವರ ತ್ರಿಪಿಟಿಕ ಜಾತಕ ಕಥೆಗಳಲ್ಲಿ, ಜೈನಾಗಮ ಜೈನ ಪುರಾಣಗಳಲ್ಲಿ ಹಾಗೂ ಲೋಕಾಯತ ಸಿದ್ಧಾಂತದಲ್ಲಿ ನಿರೂಪಿತವಾಗಿದೆ. ವೇದ ಪ್ರಮಾಣವನ್ನು ಅಂಗೀಕರಿಸಿದವು ಆಸ್ತಿಕ ಹಾಗೂ ನಿರಾಕರಿಸಿದುವು ನಾಸ್ತಿಕ; ಇವುಗಳಲ್ಲಿಯೂ ಆತ್ಮತತ್ತ್ವವನ್ನು ಜೈನರು ಅಂಗೀಕರಿಸುತ್ತಾರೆ, ಬೌದ್ಧರು ನಿರಾಕರಿಸುತ್ತಾರೆ. ಚಾರ್ವಾಕರು ದೇಹಾತ್ಮವಾದಿಗಳು.

ಪ್ರೊ. ಪ್ರಸಾದರ ಶೈಲಿಯ ಮುಖ್ಯ ಗುಣ ಸ್ಪಷ್ಟತೆ ಹಾಗೂ ಸಂಕ್ಷಿಪ್ತತೆ. ಒಂದು ಉದಾಹರಣೆ: ''ಒಮ್ಮೊಮ್ಮೆ ವೇದಾಂತಿಗಳು ಆಗಮಗಳನ್ನು ವೇದಬಾಹ್ಯವೆಂದು ದೂರುವುದೂ ಆಗಮಿಕರು ವೇದವನ್ನು ಮೋಕ್ಷೋಪಯೋಗಿ ಅಲ್ಲದ ಯಜ್ಞವಾದವೆಂದು ತಿರಸ್ಕರಿಸುವುದೂ ಕಾಣಬರುವುದುಂಟು. ಮೋಕ್ಷಸಾಧನೆ ಹಾಗೂ ಸಾಕ್ಷಾತ್ಕಾರಕ್ಕಾಗಿ ಹೊರಟ ಆಗಮಗಳು ಕೆಲವೊಮ್ಮೆ ಹತ್ತಿರದ ದಾರಿಗಳೆಂದು ಉಗ್ರ ಹಾಗೂ ಆಕ್ಷೇಪಾರ್ಹ ಆಚಾರಗಳಿಗೂ ಅವಕಾಶವಿತ್ತಿರುವುದನ್ನು ನೋಡುತ್ತೇವೆ. ಕೆಲವೊಂದು ಶೈವ ಹಾಗೂ ಶಾಕ್ತಮತಗಳಲ್ಲಿ (ಕಾಪಾಲಿಕ, ಕೌಲ, ಅಘೋರಿ, ಇತ್ಯಾದಿ) ಮಾಂಸ, ಮದ್ಯ, ಮತ್ಸ್ಯ, ಮುದ್ರಾ, ಮೈಥುನ ಮುಂತಾದ ವಾಮಾಚಾರಗಳೂ, ನರಬಲಿಯೇ ಮುಂತಾದ ಕ್ರೂರ ಹಿಂಸಾಚಾರಗಳ ಆಚರಣೆಗಳಿಂದಾಗಿ ಇವು ಸಾಮಾಜಿಕ ಬಹಿಷ್ಕಾರಕ್ಕೂ ಗುರಿಯಾದವು.

''ಆಗಮಗಳೆಲ್ಲ ಸಾಮಾನ್ಯವಾಗಿ ನಾಲ್ಕು ಪಾದಗಳಲ್ಲಿ ವಿಭಕ್ತವಾಗಿರುತ್ತವೆ:

೧. ವಿದ್ಯಾ ಅಥವಾ ಜ್ಞಾನಪಾದ. ೨. ಯೋಗಪಾದ. ೩. ಕ್ರಿಯಾಪಾದ. ೪. ಚರ್ಯಾಪಾದ.

''ಕ್ರಿಯಾ ಮತ್ತು ಚರ್ಯಾಪಾದಗಳೇ ಗಾತ್ರದಲ್ಲಿ ವಿಸ್ತೃತವಾಗಿದ್ದು, ದೇವಾಲಯಗಳ ನಿರ್ಮಾಣವಿಧಿ, ಪೂಜಾಕ್ರಮಗಳು, ಮೂರ್ತಿ ಪ್ರತಿಷ್ಠಾವಿಧಾನಗಳು, ಧಾರ್ಮಿಕ ಸಂಪ್ರದಾಯಗಳು ಇವುಗಳ ವಿವರಣೆಗೆ ಮೀಸಲಾಗಿವೆ. ಜ್ಞಾನ ಹಾಗೂ ಯೋಗ ಪಾದಗಳಲ್ಲಿ ತಾತ್ತ್ವಿಕ ವಿವೇಚನೆ, ಸೃಷ್ಟಿಪ್ರಕ್ರಿಯೆ, ಮೋಕ್ಷಸಾಧನೆಗಳ ನಿರ್ದೇಶನಗಳೂ ಬರುತ್ತವೆ.''

ಪುಸ್ತಕದ ಬೆಲೆ, ಮುದ್ರಣ, ಕಾಗದ ಎಲ್ಲವೂ ಸಮರ್ಪಕವಾಗಿದೆ. ರೇಖಾನಕ್ಷೆಗಳನ್ನು ಮುದ್ರಿಸುವ ಸಲುವಾಗಿಯೆ ಪುಸ್ತಕವನ್ನು ಥೀಸಿಸ್‌ಗಳಂತೆ ದೊಡ್ಡ ಆಕಾರದಲ್ಲಿ ತರಲಾಗಿದೆ. ಹೆಚ್ಚು ಜನರಿಗೆ ತಲುಪುವಂತೆ ಇಂಗ್ಲಿಷ್ ಹಾಗೂ ಹಿಂದಿಯಲ್ಲಿ ಈ ಪುಸ್ತಕವನ್ನು ಪ್ರಕಟಿಸುವ ಯೋಜನೆಯೂ ಇದೆ. ಭೌತಶಾಸ್ತ್ರದ ಪ್ರಾಧ್ಯಾಪಕ ಹಾಗೂ ವಿಜ್ಞಾನಿಯೊಬ್ಬರು ಆಧುನಿಕ ಮನಸ್ಸಿಗೆ ಹಿಡಿಸುವಂತೆ ಮಾಡಿದ ಈ ವರ್ಗೀಕೃತ ನಿರೂಪಣೆ ಸ್ತುತ್ಯರ್ಹ ಪ್ರಯತ್ನ.

*– ಡಾ. ಹೆಚ್. ಪಾಂಡುರಂಗ ವಿಠಲ*

### ತಿದ್ದುಪಡಿ

ಕಳೆದ ನವೆಂಬರ್ 2016ರ ಸಂಚಿಕೆಯ ಪುಸ್ತಕ ಪರಿಚಯ ವಿಭಾಗದಲ್ಲಿ ಸಿ.ಎಸ್.ಮಂಗಳಮ್ಮ ಅವರ **'ಮಹಾಭಾರತ ಕಥಾಸಂಗ್ರಹ'** ಕೃತಿಯ ಬೆಲೆ ರೂ.130 ಎಂದು ತಪ್ಪಾಗಿ ಪ್ರಕಟವಾಗಿತ್ತು. ಅದು **ರೂ.330.00** ಎಂದಾಗಬೇಕು. ಈ ತಿದ್ದುಪಡಿಗಾಗಿ ವಿಷಾದಿಸುತ್ತೇವೆ. *–ಸಂ*

**ಭೇತವ್ಯಂ ನ ತಥಾ ಶತ್ರೋರ್ನಾಗ್ನೇರ್ನಾಹೇರ್ನ ಚಾಶನೇಃ ।**
**ಇಂದ್ರಿಯೇಭ್ಯೋ ಯಥಾ ಸ್ವೇಭ್ಯಸ್ತೈರಜಸ್ರಂ ಹಿ ಹನ್ಯತೇ ॥**

ಶತ್ರುವಿಗಾಗಲಿ, ಬೆಂಕಿಗಾಗಲಿ, ಸರ್ಪಕ್ಕಾಗಲಿ, ಸಿಡಿಲಿಗಾಗಲಿ ಅಷ್ಟು ಹೆದರಬೇಕಾಗಿಲ್ಲ. ತನ್ನ ಇಂದ್ರಿಯಗಳಿಗೆ ಹೆಚ್ಚು ಹೆದರಬೇಕಾಗಿದೆ. ಏಕೆಂದರೆ, ಅವು ಸದಾ ಇವನನ್ನು ಪೀಡಿಸುತ್ತಲೇ ಇರುತ್ತವೆ.

*– ಸೌಂದರನಂದ, 13.31*



# ತ್ರೈಲಂಗ ಸ್ವಾಮಿಗಳು

**ಸ್ವಾಮಿ ವೀರೇಶಾನಂದ**

ಶ್ರೀರಾಮಕೃಷ್ಣರು ವಾರಾಣಸಿಗೆ ತೀರ್ಥಯಾತ್ರೆಗೆ ಕೈಗೊಂಡಾಗ ಒಬ್ಬ ಮಹಾತ್ಮರ ದರ್ಶನ ಮಾಡಿದರು. ಅವರ ಆಧ್ಯಾತ್ಮಿಕ ಮಹಾನತೆಯನ್ನು ಕೊಂಡಾಡಿದರು. ಅವರನ್ನು 'ನಡೆದಾಡುವ ವಿಶ್ವನಾಥ' ನೆಂದು ಹೊಗಳಿದರು. ಅವತಾರಪುರುಷರಿಂದಲೇ ಹೀಗೆ ಸನ್ಮಾನವನ್ನು ಪಡೆದ ಆ ಮಹಾಪುರುಷರ ಹೆಸರು 'ತ್ರೈಲಂಗ ಸ್ವಾಮಿ' ಎಂದು. ಐತಿಹ್ಯದ ಪ್ರಕಾರ ಅವರು ೨೮೦ ವರ್ಷಗಳ ಕಾಲ ಜೀವಿಸಿದ್ದರಂತೆ (೧೬೦೭-೧೮೮೭). ವಾರಾಣಸಿಯಲ್ಲಿಯೇ ೧೭೩೭ ರಿಂದ ೧೮೮೭ರ ವರಗೆ ಅವರು ನೆಲೆಸಿದ್ದರು. ವಾರಾಣಸಿಯ ಜನತೆ ಅವರನ್ನು ಶಿವನ ಅವತಾರವೆಂದೇ ಕರೆಯುತ್ತಿದ್ದರು. ಅವರೊಬ್ಬ ದೊಡ್ಡ ಯೋಗಿ. ಅವರ ಜೀವನವು ಅದ್ಭುತಗಳ, ವಿಸ್ಮಯಗಳ ಗಾಥೆಯಾಗಿದೆ; ಪರಮಾಶ್ಚರ್ಯದ ಸಾಧನೆಗಳ ಕಥನವಾಗಿದೆ.

**ಬಾಲ್ಯಜೀವನ :** ಇವರು ಹುಟ್ಟಿದ್ದು ಕುಂಬಿಲಪುರಂ ಎಂಬ ಗ್ರಾಮದಲ್ಲಿ. ಅದು ಆಂಧ್ರಪ್ರದೇಶದ ವಿಜಯನಗರಂ ಜಿಲ್ಲೆಯಲ್ಲಿದೆ. ನರಸಿಂಗ ರಾವ್ ಮತ್ತು ವಿದ್ಯಾವತಿ ದೇವಿ ಇವರು ತಂದೆ ತಾಯಿಯರು. ನರಸಿಂಗ ರಾವ್ ಗ್ರಾಮದ ಒಬ್ಬ ಮುಖಂಡರಾಗಿದ್ದರು. ಸದ್ಗುಣಿ ಮತ್ತು ಸತ್ಯಸಂಧರಾಗಿದ್ದ ಅವರನ್ನು ಆ ಊರಿನ ಜನರೆಲ್ಲ ಗೌರವಿಸುತ್ತಿದ್ದರು. ವಿದ್ಯಾವತಿ ಗಂಡನ ಎಲ್ಲ ಕೆಲಸ ಕಾರ್ಯಗಳಿಗೆ ಆಸರೆಯಾಗಿ ಇದ್ದಳು. ಮನೆಯಲ್ಲಿ ಇತರರ ಸೇವೆ ಮಾಡುತ್ತಿದ್ದುದಲ್ಲದೆ, ಸ್ವಂತ ಆಧ್ಯಾತ್ಮಿಕ ಸಾಧನೆಯನ್ನೂ ತಪ್ಪದೆ ಮಾಡುತ್ತಿದ್ದಳು. ಹಲವಾರು ವರ್ಷಗಳು ಕಳೆದರೂ ಈ ದಂಪತಿಗಳಿಗೆ ಮಕ್ಕಳಾಗಲಿಲ್ಲ. ವಂಶೋದ್ಧಾರಕನಾದ ಒಬ್ಬ ಮಗನನ್ನು ಪಡೆಯಬೇಕೆಂಬ ಅವರ ಆಸೆ ನಿರಾಸೆಯಾಗಿಯೇ ಉಳಿದುಹೋಯಿತು.

ಇನ್ನೊಬ್ಬ ಹೆಣ್ಣುಮಗಳನ್ನು ಮದುವೆಯಾಗಿ, ವಂಶದ ಕುಡಿಯಾದ ಮಗನನ್ನು ಪಡೆಯುವಂತೆ ವಿದ್ಯಾವತಿ ಗಂಡನಿಗೆ ಸಲಹೆ ಕೊಟ್ಟಳು. ಇದನ್ನು ಒಪ್ಪಿ ನರಸಿಂಗರಾಯನು ಇನ್ನೊಂದು ಮದುವೆಯಾದನು. ವಿದ್ಯಾವತಿ ತನ್ನ ಸಾಧನೆಯನ್ನು ತೀವ್ರಗೊಳಿಸಿದಳು. ಶಿವನನ್ನು ಉತ್ಕಟ ಭಕಿಯಿಂದ ಆರಾಧಿಸಲು ಆರಂಭಿಸಿದಳು. ಈ ಸಾಧನ ಕಾಲದಲ್ಲಿ ಶಿವನು ಮಗನೊಬ್ಬನನ್ನು ಪ್ರದಾನ ಮಾಡಿದಂತೆ ಅವಳು ಕನಸು ಕಂಡಳು. ಈ ಸ್ವಪ್ನವು ಬಹಳ ಬೇಗನೆ ಫಲವನ್ನು ನೀಡಿತು. ಗರ್ಭಿಣಿಯಾದ ವಿದ್ಯಾವತಿ ಮಂಗಳಕರವಾದ ಮುಹೂರ್ತದಲ್ಲಿ ಸುಂದರವಾದ ಮಗುವೊಂದಕ್ಕೆ ಜನ್ಮವೆತ್ತಳು. ಮಗುವಿಗೆ ಶಿವರಾಮ ಎಂದು ಹೆಸರಿಟ್ಟರು. ಇದಾಗಿ ಒಂದು ವರ್ಷ ಕಳೆದ ನಂತರ ನರಸಿಂಗನ ಎರಡನೆಯ ಹೆಂಡತಿ ಕೂಡ ಒಂದು ಗಂಡು ಮಗುವಿಗೆ ಜನ್ಮ ನೀಡಿದಳು. ಅವನಿಗೆ ಶ್ರೀಧರ ಎಂಬ ಹೆಸರಿಟ್ಟರು. ಮನೆಯವರು ಇಬ್ಬರು ಮಕ್ಕಳನ್ನೂ ಸುಖವಾಗಿ ಬೆಳೆಸಿದರು. ಮನೆಯ ವಾತಾವರಣ ನಂದಗೋಕುಲದಂತೆ ಆನಂದಮಯವಾಗಿತ್ತು.

ಒಂದು ದಿನ ವಿದ್ಯಾವತಿಯು ಭಗವಾನ್ ಶಿವನ ಧ್ಯಾನ ಮಾಡುತ್ತಿದ್ದಳು. ಆ ಸಮಯದಲ್ಲಿಯೇ ಶಿವರಾಮನು ಅವಳು ಪೂಜಿಸುತ್ತಿದ್ದ ಶಿವಲಿಂಗದ ಮುಂದುಗಡೆಯೇ ಮಲಗಿ ನಿದ್ರೆ ಮಾಡುತ್ತಿದ್ದನು. ಧ್ಯಾನ ಕಳೆದು ಕಣ್ದೆರೆದ ವಿದ್ಯಾವತಿ ಕಂಡದ್ದೇನು? ಶಿವಲಿಂಗದಿಂದ ಜ್ಯೋತಿಃಪುಂಜವೊಂದು ಹೊರಸೂಸಿ, ಮಲಗಿದ್ದ ಮಗುವಿನತ್ತ ಧಾವಿಸುತ್ತಿತ್ತು.

ಶಿವರಾಮನು ಗಂಭೀರಪ್ರವೃತ್ತಿಯ ಬಾಲಕನಾಗಿದ್ದನು. ಯಾವಾಗಲೂ ಅಂತರ್ಮುಖಿಯಾಗಿರುತ್ತಿದ್ದನು. ಬಾಲ್ಯದಲ್ಲಿ ಸಹಜವಾದ ಆಟ ವಿನೋದಗಳಿಗಿಂತ ಹೆಚ್ಚಾಗಿ, ಏಕಾಂತದಲ್ಲಿಯೇ ತನ್ನ ಸಮಯವನ್ನೆಲ್ಲ ಕಳೆಯುತ್ತಿದ್ದನು. ತಾಯಿ ಹೇಳುತ್ತಿದ್ದ ಪುರಾಣ ಪುಣ್ಯಕತೆಗಳನ್ನು ಕೇಳುತ್ತ ಆನಂದದಿಂದ ಇದ್ದನು. ಸುತ್ತಲ ಜನರು ಏನು ಹೇಳುತ್ತಾರೋ ಎಂಬ ಬಗ್ಗೆ ಅವನಿಗೆ ಎಳ್ಳಷ್ಟೂ ಗಮನ ಇರಲಿಲ್ಲ. ಪ್ರಾಪ್ತ ವಯಸ್ಕನಾದ ಮಗನಿಗೆ ಮದುವೆ ಮಾಡಲು ನರಸಿಂಗನು ಇಚ್ಛಿಸಿದನು. ಆದರೆ ಶಿವರಾಮನು ಖಡಾಖಂಡಿತವಾಗಿ ಅದಕ್ಕೆ ನಿರಾಕರಿಸಿಬಿಟ್ಟನು. ಅದು ತನ್ನ ಆಧ್ಯಾತ್ಮಿಕ ಪ್ರಗತಿಗೆ ಮಾರಕವಾಗುತ್ತದೆ ಎಂದು ಅವನು ಎಣಿಸಿದನು. ಕಡೆಗೆ ತಂದೆಯೇ ಮಗನ ಭೀಷ್ಮ ಪ್ರತಿಜ್ಞೆಗೆ ತಲೆಬಾಗಬೇಕಾಯಿತು. ಗತಿಯಿಲ್ಲದೆ, ತನ್ನ ಎರಡನೆಯ ಮಗನಾದ

ಶ್ರೀಧರನಿಗೆ, ಮದುವೆಯಾಗಿ, ವಂಶವನ್ನು ಮುಂದುವರಿಸಿಕೊಂಡು ಹೋಗುವಂತೆ ಕೇಳಿಕೊಂಡನು.

**ವೈರಾಗ್ಯ ಜೀವನ :** ಶಿವರಾಮನಿಗೆ ನಲುವತ್ತು ವರ್ಷ ವಯಸ್ಸಾಗಿದ್ದಾಗ ಅವನ ತಂದೆ ತೀರಿಕೊಂಡನು. ಒಡನೆ ಕುಟುಂಬವನ್ನು ತ್ಯಜಿಸಿ, ಸಂನ್ಯಾಸಿಯಾಗುವ ತವಕ ಅವನಿಗೆ ಉಂಟಾಯಿತು. ಆದರೆ ತಾಯಿ ಅದಕ್ಕೆ ಅಡ್ಡಿಯೊಡ್ಡಿದಳು. ತಾನಿರುವ ತನಕ ಮನೆಯಲ್ಲೇ ಉಳಿಯಬೇಕು ಎಂದು ಕಟ್ಟುಪಾಡು ಮಾಡಿದಳು. ಹಾಗೆ ಮಾಡಿದರೆ ಅವನಿಗೆ ಸದ್ಗತಿ ಮುಕ್ತಿಗಳು ಲಭಿಸುತ್ತವೆ ಎಂದು ಆಶೀರ್ವಾದ ಮಾಡಿದಳು. ಶಿವರಾಮನು ತಾಯಿಯ ಆಣತಿಗೆ ತಲೆಬಾಗಿದನು.

ಇದಲ್ಲದೆ ತಾಯಿ ಒಂದು ರಹಸ್ಯವನ್ನು ಅವನಿಗೆ ಹೇಳಿದಳು. ವಿದ್ಯಾವತಿಯ ತಂದೆ ಬಹು ದೊಡ್ಡ ಕಾಳೀಸಾಧಕರಾಗಿದ್ದರು. ''ನಿನ್ನ ಮಗನಾಗಿ ಹುಟ್ಟಿ ಸಾಧನೆಯನ್ನು ಮುಂದುವರೆಸುತ್ತೇನೆ'' ಎಂದು ಅವರು ಮಗಳಿಗೆ ಹೇಳಿದ್ದರಂತೆ. ಇದರಂತೆ ತನ್ನ ತಂದೆಯೇ ಮಗ ಶಿವರಾಮನಾಗಿ ಮರುಹುಟ್ಟು ಪಡೆದಿದ್ದಾನೆ ಎಂದು ವಿದ್ಯಾವತಿ ನಂಬಿದ್ದಳು. ಈ ವಿಷಯವನ್ನು ಮಗನಿಗೆ ಹೇಳಿ, ಕಾಳೀಸಾಧನೆಯನ್ನು ಕೈಗೊಳ್ಳುವಂತೆ ಉತ್ತೇಜಿಸಿದಳು. ಮಾತೆಯ ಆಶಯವನ್ನು ಶಿವರಾಮನು ಶಿರಸಾ ಪಾಲಿಸಿದನು. ಸಮೀಪದ ಕಾಳಿಯ ದೇವಸ್ಥಾನದಲ್ಲಿ ಸಾಧನೆಯನ್ನು ನಡೆಸಿದನು. ಆ ಸಮಯದಲ್ಲಿ ಎಂದಿಗೂ ತಾಯಿಯನ್ನು ಅವನು ಅಗಲಲಿಲ್ಲ.

ಹನ್ನೆರಡು ವರ್ಷಗಳ ನಂತರ, ೧೬೪೯ರಲ್ಲಿ ತಾಯಿ ದಿವಂಗತಳಾದಳು. ಕುಟುಂಬದ ಬಂಧನದಿಂದ ಶಿವರಾಮನಿಗೆ ಬಿಡುಗಡೆ ಸಿಕ್ಕಿತು. ಅಲೆದಾಡುವ ಬೈರಾಗಿಯಾಗಿ ಅವನು ಮನೆಯಿಂದ ಹೊರ ಹೊರಟನು. ತನ್ನ ತಾಯಿಯ ಚಿತಾಭಸ್ಮವನ್ನು ಒಂದು ಬಟ್ಟೆಯಲ್ಲಿ ಕಟ್ಟಿಕೊಂಡನು. ಊರಿನ ಸ್ಮಶಾನವೇ ಅವನ ಮೊದಲ ಸಾಧನಾಕ್ಷೇತ್ರವಾಯಿತು. ತಾಯಿಯ ಚಿತಾಭಸ್ಮವನ್ನೇ ಮೈತುಂಬ ಪೂಸಿಕೊಳ್ಳುತ್ತಿದ್ದನು. ಕಾಳೀಸಾಧನೆಯನ್ನು ಹಗಲೂರಾತ್ರಿ ನಡೆಸಿದನು. ಹೀಗೆ ಆ ಸ್ಮಶಾನದಲ್ಲಿ ೨೦ ವರ್ಷಗಳ ಕಾಲ ತಪಸ್ಸಾಧನೆಯನ್ನು ಮಾಡಿದನು. ಆ ಸಮಯದಲ್ಲಿ ತನ್ನ ಮಲತಮ್ಮನಾದ ಶ್ರೀಧರ ಆ ಸ್ಮಶಾನದ ಸನಿಹದಲ್ಲಿಯೇ ಕಟ್ಟಿಕೊಟ್ಟ ಪುಟ್ಟ ಪರ್ಣಕುಟಿಯಲ್ಲಿ ನೆಲೆಸಿದ್ದನು.

**ಗುರುವಿನ ಅನುಗ್ರಹ :** ಇಪ್ಪತ್ತು ವರ್ಷಗಳ ಸಾಧನೆಯ ನಂತರ, ಭಗವಂತನ ಆದೇಶದ ಅನುಸಾರವಾಗಿ, ಶಿವರಾಮನು ತನ್ನ ಗುರುದೇವನ ದರ್ಶನವನ್ನು ಮಾಡಿದನು. ಇದು ನಡೆದಿದ್ದು ೧೬೭೯ರಲ್ಲಿ. ಗುರುಗಳಾದ ಭಗೀರಥಾನಂದ ಸರಸ್ವತಿ ಪಂಜಾಬಿನವರು. ಇನ್ನೊಂದು ಕಥೆಯ ಪ್ರಕಾರ ಗುರುವಿನ ಹೆಸರು ರತ್ನಾನಂದ ಸರಸ್ವತಿ. ಗುರು-ಶಿಷ್ಯರಿಬ್ಬರೂ ಒಟ್ಟಿಗೆ ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದರು. ಕಡೆಗೆ ಅವರು ರಾಜಸ್ಥಾನದ ಪುಷ್ಕರ ಸರೋವರವನ್ನು ತಲುಪಿದರು. ಇಲ್ಲಿ ಗುರುವು ಶಿವರಾಮನಿಗೆ ಸಂನ್ಯಾಸ ದೀಕ್ಷೆಯನ್ನು ನೀಡಿದರು. ಸ್ವಾಮಿ ಗಣಪತಿ ಸರಸ್ವತಿ ಎಂಬ ಹೊಸ ನಾಮಧೇಯವನ್ನೂ ನೀಡಿದರು. ಇದಾಗಿ ಸ್ವಲ್ಪ ಸಮಯದಲ್ಲಿ ಗುರುಗಳು ದೇಹತ್ಯಾಗ ಮಾಡಿದರು. ನೂತನ ಯತಿಯು ಪುಷ್ಕರದಲ್ಲಿಯೇ ನೆಲೆಸಿ ಸುಮಾರು ೧೦ ವರ್ಷಗಳ ಕಾಲ ಕಠೋರವಾದ ತಪಸ್ಸನ್ನು ಆಚರಿಸಿದರು. ಅದಾದ ಮೇಲಷ್ಟೆ ತೀರ್ಥಯಾತ್ರೆಗೆ ಹೊರಟರು. ಗಣಪತಿ ಸರಸ್ವತಿ ಸ್ವಾಮಿಗಳು ಪ್ರಯಾಗವನ್ನು ೧೭೩೩ರಲ್ಲಿ ತಲುಪಿದರು. ಕಡೆಗೆ ವಾರಾಣಸಿಗೆ ೧೭೩೭ರಲ್ಲಿ ತಲುಪಿದರು. ಇಲ್ಲಿಗೆ ಅವರ ತೀರ್ಥಯಾತ್ರೆ ಕೊನೆಗೊಂಡಿತು.

**'ನಡೆದಾಡುವ ವಿಶ್ವನಾಥ' :** ವಾರಾಣಸಿಯಲ್ಲಿ ನೆಲಸಿದ ನಂತರ ವಷ್ಟೇ ಗಣಪತಿ ಸರಸ್ವತಿ ಸ್ವಾಮಿಗಳಿಗೆ ತ್ರೈಲಂಗ ಸ್ವಾಮಿಗಳು ಎಂಬ ಹೆಸರು ಬಂತು. ೧೮೮೭ರಲ್ಲಿ ತಮ್ಮ ದೇಹಾಂತ್ಯವಾಗುವ ತನಕವೂ, ತ್ರೈಲಂಗ ಸ್ವಾಮಿಗಳು ವಾರಾಣಸಿಯಲ್ಲಿ ಬೇರೆ ಬೇರೆ ಕಡೆ ನೆಲೆಸಿದ್ದರು. ಅವುಗಳಲ್ಲಿ ಕೆಲವೆಂದರೆ, ಅಸಿ ಘಾಟ್, ಹನುಮಾನ್ ಘಾಟ್‌ನಲ್ಲಿ ಇರುವ ವೇದವ್ಯಾಸ ಆಶ್ರಮ ಮತ್ತು ದಶಾಶ್ವಮೇಧ ಘಾಟ್. ವಾರಾಣಸಿಯ ಬೀದಿಗಳಲ್ಲಿ ನಗ್ನರಾಗಿಯೇ ಅವರು ಸುತ್ತಾಡುತ್ತಲಿದ್ದರಂತೆ. ಅವರದು 'ಬಾಲಭಾವ'. ಮಕ್ಕಳಂತೆ ಯಾವುದಕ್ಕೂ ಅವರು ತಲೆಕೆಡಿಸಿಕೊಳ್ಳುತ್ತಿರಲಿಲ್ಲ, ನಿಸ್ಪೃಹರಾಗಿದ್ದರು. ಕೆಲವು ವೇಳೆ ತ್ರೈಲಂಗ ಸ್ವಾಮಿಗಳು ಗಂಟೆಗಟ್ಟಲೆ ಗಂಗಾನದಿಯಲ್ಲಿ ಈಜಾಡುತ್ತಿದ್ದರು ಅಥವಾ ತೇಲಾಡುತ್ತಿದ್ದರು. ಅವರು ಮಾತನಾಡುತ್ತಿದ್ದುದು ಬಹಳ ಕಡಿಮೆ. ಕೆಲವೊಮ್ಮೆ ದಿನಗಟ್ಟಲೆ ಮೌನವಾಗಿರುತ್ತಿದ್ದುದೂ ಉಂಟು.

ಇವರ ಯೋಗಶಕ್ತಿಯನ್ನು ಮತ್ತು ಆಧ್ಯಾತ್ಮಿಕ ತೇಜಸ್ಸನ್ನು ಕಂಡ ಜನರು ಅವರೆಡೆಗೆ ಆಕರ್ಷಿತರಾದರು. ಬಂಗಾಳ ಪ್ರದೇಶದಿಂದ ಬಂದ ಹಲವಾರು ಮಹಾಪುರುಷರು ಮತ್ತು ಗಣ್ಯವ್ಯಕ್ತಿಗಳು ಇವರನ್ನು ಭೇಟಿ ಮಾಡಿ ಪ್ರಭಾವಿತರಾದರು. ಅವರಲ್ಲಿ ಕೆಲವರ ಹೆಸರುಗಳು ಹೀಗಿವೆ: ಲೋಕನಾಥ ಬ್ರಹ್ಮಚಾರಿ, ವೇಣಿ ಮಾಧವ ಬ್ರಹ್ಮಚಾರಿ, ಭಗವಾನ್ ಗಂಗೂಲಿ, ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ, ಸ್ವಾಮಿ ಅಭೇದಾನಂದ, ಮಹೇಂದ್ರನಾಥ ಗುಪ್ತ, ಲಾಹರಿ ಮಹಾಶಯ ಮುಂತಾದವರು.

ಶ್ರೀರಾಮಕೃಷ್ಣರು ತ್ರೈಲಂಗ ಸ್ವಾಮಿಗಳನ್ನು ಭೇಟಿ ಮಾಡಿದ ನಂತರ ಅವರ ಬಗ್ಗೆ ಹೀಗೆ ಉದ್ಗಾರವೆತ್ತಿದರು: ''ಸಾಕ್ಷಾತ್ ವಿಶ್ವನಾಥನೇ ತನ್ನನ್ನು ತೋರ್ಪಡಿಸಿಕೊಳ್ಳಲು ಇವರ ಶರೀರವನ್ನು ಒಂದು ಯಂತ್ರವನ್ನಾಗಿ ಮಾಡಿಕೊಂಡಿರುವುದನ್ನು ನಾನು ಕಂಡೆ. ಅವರು ಜ್ಞಾನಮಾರ್ಗದ ಪರಾಕಾಷ್ಠತೆಯನ್ನು ತಲುಪಿದ್ದರು. ಅವರಲ್ಲಿ ಯಾವ ರೀತಿಯ ದೇಹಭಾವವೂ ಇರಲಿಲ್ಲ. ನದಿಯ ಪಾತ್ರದ ಮರಳು ಎಷ್ಟು ಸುಡುತ್ತಿತ್ತು ಎಂದರೆ ಯಾರೂ ಅದರ ಮೇಲೆ ಕಾಲಿಡಲೂ ಆಗುತ್ತಿರಲಿಲ್ಲ. ಆದರೆ ಇವರು ಅದರ ಮೇಲೆ ಅನಾಯಾಸವಾಗಿ ಹೊರಳಾಡುತ್ತಿದ್ದರು.'' ತ್ರೈಲಂಗ ಸ್ವಾಮಿಗಳು ಒಬ್ಬ ಪರಮಹಂಸರೆಂದೂ ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅಲ್ಲದೆ, 'ಇಡೀ ಕಾಶಿ ಕ್ಷೇತ್ರವೇ ಅವರ ವಾಸ್ತವ್ಯದಿಂದ ಬೆಳಗುತ್ತಿತ್ತು' ಎಂದೂ ನುಡಿಯುತ್ತಿದ್ದರು.

ತ್ರೈಲಂಗಸ್ವಾಮಿಗಳು ಅಯಾಚಕ ವ್ರತವನ್ನು ಕೈಗೊಂಡಿದ್ದರು. ಅಂದರೆ ತಮಗೆ ಸಿಕ್ಕಿದ್ದರಲ್ಲಿ ತೃಪ್ತಿಯಿಂದ ಇರುವುದು. ಅವರ ಜೀವನದ ಕಡೆಯ ಘಟ್ಟದಲ್ಲಿ ಅವರ ಹೆಸರು ಎಲ್ಲೆಡೆ ಹಬ್ಬಿತು. ನೂರಾರು ತೀರ್ಥಯಾತ್ರಿಗಳು ಅವರನ್ನು ಕಾಣಲು ಬರುತ್ತಿದ್ದರು. ಈ ದಿನಗಳಲ್ಲಿ ಅವರು ಅಜಗರವೃತ್ತಿಯ ವ್ರತವನ್ನು ಕೈಗೊಂಡಿದ್ದರು. ಅಲುಗಾಡದೆ ಒಂದು ಕಡೆ ಕುಳಿತಿರುತ್ತಿದ್ದರು. ಭಕ್ತರು ಕೊಡಗಟ್ಟಲೆ ನೀರು ತಂದು ಮುಂಜಾನೆಯಿಂದ ಹಿಡಿದು ಮಧ್ಯಾಹ್ನದವರೆಗೆ ಅವರ ತಲೆಯ ಮೇಲೆ ಸುರಿದು ಪೂಜಿಸುತ್ತಿದ್ದರು. ಅವರು ಶಿವನ ಪ್ರತಿರೂಪವೆಂದೇ ಭಾವಿಸುತ್ತಿದ್ದರು.

**ಸಿದ್ಧಪುರುಷ :** ತ್ರೈಲಂಗ ಸ್ವಾಮಿಗಳ ಸುತ್ತಲೂ ಅನೇಕ ಕತೆಗಳು ಹೆಣೆದುಕೊಂಡಿವೆ. ಜನಗಳ ದೃಷ್ಟಿಯಲ್ಲಿ ರಹಸ್ಯವಿದ್ಯೆಗಳನ್ನು ಕರಗತ ಮಾಡಿಕೊಂಡ ಒಬ್ಬ ಸಿದ್ಧಪುರುಷರು ಎಂದು ಅನ್ನಿಸಿಕೊಂಡಿದ್ದಾರೆ. ಪಾಶ್ಚಾತ್ಯ ವಿದ್ವಾಂಸನಾದ ರಾಬರ್ಟ್ ಅರ್ನೆಟ್ ಎಂಬಾತನು ಅವರ ಪವಾಡಗಳೆಲ್ಲ ಅಧಿಕೃತವಾಗಿ ದಾಖಲಿಸಿರುವಂಥವು ಎಂದು ಪ್ರತಿಪಾದಿಸಿದ್ದಾನೆ. ಅವರ ಪವಾಡಶಕ್ತಿಗಳನ್ನೆಲ್ಲ ಕಟ್ಟುಕತೆ ಎನ್ನಲಾಗದು ಎಂದು ಅವನು ಹೇಳುತ್ತಾನೆ. ತ್ರೈಲಂಗ ಸ್ವಾಮಿಗಳು ೨೮೦ ವರ್ಷಗಳ ಕಾಲ ಬದುಕಿ ಬಾಳಿದ್ದೇ ಒಂದು ದೊಡ್ಡ ಪವಾಡ. ಇದಲ್ಲದೆ ಅವರದು ದೊಡ್ಡ ಮೈಕಟ್ಟು. ಅವರು ಉಣ್ಣುತ್ತಿದ್ದುದೇ ಅಪರೂಪ. ಆದರೂ ಅವರು ಸುಮಾರು ೧೪೦ ಕೆ.ಜಿ. ತೂಕ ವಿದ್ದರಂತೆ.

ಇದಲ್ಲದೆ ತ್ರೈಲಂಗ ಸ್ವಾಮಿಗಳು ಇತರರ ಮನಸ್ಸನ್ನು ಒಂದು ಪುಸ್ತಕದ ಹಾಗೆ ಓದಿಬಿಡುತ್ತಿದ್ದರು. ಅವರು ಎಂಥ ವಿಷವನ್ನಾದರೂ ಕುಡಿದು ಜೀರ್ಣಿಸಿಕೊಳ್ಳುತ್ತಿದ್ದರು. ಅಂಥ ಅನೇಕ ಸನ್ನಿವೇಶಗಳನ್ನು ಅವರ ಜೀವನದಲ್ಲಿ ನಾವು ಕಾಣುತ್ತೇವೆ. ತ್ರೈಲಂಗ ಸ್ವಾಮಿಗಳು ಬಹುಕಾಲ ಉಪವಾಸ ಮಾಡುತ್ತಿದ್ದರು. ತದನಂತರ ಕೊಡಗಟ್ಟಲೆ ಕೆನೆಭರಿತ ಹಾಲನ್ನು ಕುಡಿಯುತ್ತಿದ್ದರು. ಒಬ್ಬ ವ್ಯಕ್ತಿ ಅವರನ್ನು ಪರೀಕ್ಷಿಸಲು ಬಂದನು. ಆ ವ್ಯಕ್ತಿಯು ಕ್ಯಾಲ್ಸಿಯಮ್ - ಸುಣ್ಣದ ಮಿಶ್ರಣವನ್ನು ಅವರಿಗೆ ಕುಡಿಯಲು ಕೊಟ್ಟನು. ಸ್ವಾಮಿಗಳು ಒಂದು ಕೊಡ ಪೂರ್ತಿ ಅದನ್ನು ಕುಡಿದುಬಿಟ್ಟರು. ಆದರೂ ಅವರಿಗೆ ಏನೂ ಆಗಲಿಲ್ಲ. ಅದಕ್ಕೆ ಬದಲಾಗಿ ತಂದುಕೊಟ್ಟ ವ್ಯಕ್ತಿಯೇ ಕೆಳಕ್ಕೆ ಬಿದ್ದು ಒದ್ದಾಡತೊಡಗಿದನು. ಅನಂತರ ಸ್ವಾಮಿಗಳು ತಮ್ಮ ಮೌನವನ್ನು ಮುರಿದು, ಕರ್ಮಸಿದ್ಧಾಂತವನ್ನು ಉಪದೇಶಿಸಲು ಆರಂಭಿಸಿದರು. ಕಾರ್ಯ-ಕಾರಣ ನಿಯಮವನ್ನು ನೆರೆದಿದ್ದ ಜನಗಳಿಗೆ ಬೋಧಿಸಿದರು.

ಇನ್ನೊಂದು ಪ್ರಸಂಗ ಹೀಗಿದೆ. ತ್ರೈಲಂಗ ಸ್ವಾಮಿಗಳು ಒಂದು ಚೂರೂ ಬಟ್ಟೆಯ ತುಂಡನ್ನು ಉಟ್ಟುಕೊಳ್ಳದೆ, ನಾಗಾ ಸಾಧುಗಳಂತೆ ವಾರಾಣಸಿಯ ಬೀದಿಗಳಲ್ಲಿ ಸುತ್ತುತ್ತಿದ್ದರು. ವಾರಾಣಸಿಯ ಪೊಲೀಸರು ಅವರ ಈ ನಡತೆಯನ್ನು ಕಂಡು, ಅದೊಂದು ಅಪರಾಧವೆಂದು ಭಾವಿಸಿ ಸೆರೆಮನೆಯಲ್ಲಿ ಇರಿಸಿದರು. ಸ್ವಲ್ಪಕಾಲದಲ್ಲಿಯೇ ಅವರು ಕಾರಾಗೃಹದ ಮಾಳಿಗೆಯ ಮೇಲೆ ಕಂಡುಬಂದರು. ಪೊಲೀಸಲು ಮತ್ತೆ ಬಂಧಿಸಿ ಸೆರೆಯಲ್ಲಿಟ್ಟರು. ಎರಡನೆಯ ಸಲವೂ ಹೀಗೆಯೇ ಆಯಿತು. ಪೊಲೀಸರು ತ್ರೈಲಂಗ ಸ್ವಾಮಿಗಳನ್ನು ಬಿಡುಗಡೆ ಮಾಡಲೇಬೇಕಾಯಿತು.

ತ್ರೈಲಂಗ ಸ್ವಾಮಿಗಳು ಕುಳಿತಿರುವ ಸ್ಥಾನದಿಂದ ಮೇಲೇಳುತ್ತಿದ್ದುದನ್ನು ಸಾವಿರಾರು ಜನರು ನೋಡಿದ್ದಾರೆ. ಅಲ್ಲದೆ ಗಂಟೆಗಟ್ಟಲೆ ಕಾಲ ಗಂಗಾನದಿಯ ನೀರಿನಲ್ಲಿ ಅವರು ತೇಲಾಡುತ್ತಿದ್ದರು. ಕೆಲವೊಮ್ಮೆ ಗಂಟೆಗಟ್ಟಲೆ ಕಾಲ ಅಲೆಗಳ ಒಳಗಡೆ ಅಡಗಿಬಿಡುವರು. ಬಹುಕಾಲದ ನಂತರ ಹೊರಕ್ಕೆ ಬರುವರು. ಇದಕ್ಕೆ ಕಾರಣ ಯೋಗಿಗಳು ಪಡೆದುಕೊಳ್ಳುವ 'ಭೂತಜಯ' (ಪಂಚಭೂತಗಳ ಮೇಲಿನ ವಿಜಯ) ಎನ್ನುವ ಸಿದ್ಧಿ ಎಂದು ಶಾಸ್ತ್ರ ಹೇಳುತ್ತದೆ. ಏನೇ ಇರಲಿ ತ್ರೈಲಂಗ ಸ್ವಾಮಿಗಳ ಆಧ್ಯಾತ್ಮಿಕ ಪರಿಪೂರ್ಣತೆಯೇ ಇಲ್ಲಿ ಮುಖ್ಯವಾಗಬೇಕೇ ಹೊರತು ಅವರ ಪವಾಡ ಸಿದ್ಧಿಗಳಲ್ಲ.

**ಉಪದೇಶಗಳು :** ತ್ರೈಲಂಗ ಸ್ವಾಮಿಗಳು ತಮ್ಮ ಬಳಿ ಬಂದ ಭಕ್ತರಿಗೆ ಮಾಡುತ್ತಿದ್ದ ಉಪದೇಶಗಳನ್ನು ಅವರ ಜೀವನ ಚರಿತ್ರೆಯಲ್ಲಿ ಕಾಣಬಹುದು. ಅಂಥ ಕೆಲವು ಬೋಧನೆಗಳನ್ನು ಅವರ ಶಿಷ್ಯರಲ್ಲಿ ಒಬ್ಬರಾದ ಉಮಾಚರಣ ಮುಖ್ಯೋಪಾಧ್ಯಾಯ ಎನ್ನುವವರು ತಾವು ಬರೆದ ಪುಸ್ತಕದಲ್ಲಿ ದಾಖಲಿಸಿದ್ದಾರೆ. ಬಂಧನ ಎಂದರೆ ಪ್ರಪಂಚಕ್ಕೆ ಅಂಟಿಕೊಂಡಿರುವುದು; ಮುಕ್ತಿ ಎಂದರೆ ಪ್ರಪಂಚತ್ಯಾಗ ಮತ್ತು ಭಗವಂತನಲ್ಲಿ ತನ್ಮಯತೆ ಎಂದು ಅವರು ಹೇಳುತ್ತಿದ್ದರು. ನಿರಾಸಕ್ತಿಯ ಭಾವವನ್ನು ಸಂಪೂರ್ಣವಾಗಿ ಮೈಗೂಡಿಸಿಕೊಂಡವನಿಗೆ ಈ ಜಗತ್ತೇ ಸ್ವರ್ಗವಾಗಿ ಪರಿಣಮಿಸುವುದು. ಸಂಸಾರದಿಂದ ಪಾರಾಗಬೇಕಾದರೆ ಆಧ್ಯಾತ್ಮಿಕ ಅರಿವನ್ನು ಪಡೆದುಕೊಳ್ಳುವುದು ಅತ್ಯಾವಶ್ಯಕ ಎಂದು ಅವರು ಮತ್ತೆ ಮತ್ತೆ ನುಡಿಯುತ್ತಿದ್ದರು. ಈ ಕ್ಷಣಿಕ ಜಗತ್ತಿನ ಮೇಲಿನ ನಮ್ಮ ಆಸಕ್ತಿ ಒಂದು ಬಗೆಯ ಸಾಂಕ್ರಾಮಿಕ ರೋಗವಿದ್ದಂತೆ. ಅದಕ್ಕೆ 'ನಿರಾಸಕ್ತಿ' ಯೊಂದೇ ಪರಮೌಷಧಿ ಎಂದು ಅವರು ಬೋಧಿಸಿದರು.

ಮಾನವನ ಇಂದ್ರಿಯಗಳೇ ಅವನಿಗೆ ಶತ್ರುಗಳಾಗಿವೆ. ಅವೇ ಅವನಿಗೆ ಮಿತ್ರರೂ ಆಗಬಹುದು. ಬಡ ಮನುಷ್ಯನು ಯಾರು ಗೊತ್ತೆ? ಅತ್ಯಂತ ಲೋಭಿಯೇ ಕಡು ಬಡವ. ಯಾವತ್ತೂ ತೃಪ್ತಿಯಿಂದ ಇರುವವನೇ ಶ್ರೀಮಂತ. ತೀರ್ಥಯಾತ್ರೆಗೆ ಹೋಗಬಹುದಾದ ಅತ್ಯಂತ ಪವಿತ್ರಕ್ಷೇತ್ರವೆಂದರೆ ತನ್ನ ಪರಿಶುದ್ಧ ಮನಸ್ಸು. ಈ ತೆರನ ಮನಸ್ಸು ವೇದಾಂತ ಸತ್ಯಗಳನ್ನು ಗುರುವಿನಿಂದ ಅರಸುವಂತೆ ನಮ್ಮನ್ನು ಪ್ರೇರೇಪಿಸುತ್ತದೆ. ಯಾರು ಎಲ್ಲ ಬಗೆಯ ಆಸಕ್ತಿಯಿಂದ ಮತ್ತು ವ್ಯಾಮೋಹಗಳಿಂದ ಮುಕ್ತನಾಗಿರುತ್ತಾನೋ ಅವನೇ ಸಾಧು. ಯಾರು ತಾನು ಮತ್ತು ತನ್ನದು ಎಂಬ ಭಾವನೆಗಳಿಂದ ಮೇಲೆ ಏರುತ್ತಾನೆಯೋ ಅವನೇ ಸಾಧು. ಇವು ತ್ರೈಲಂಗ ಸ್ವಾಮಿಗಳ ಉಪದೇಶಾಮೃತದ ಕೆಲವು ಹನಿಗಳು.

ತ್ರೈಲಂಗ ಸ್ವಾಮಿಗಳು ಸೋಮವಾರ, ಡಿಸೆಂಬರ್ ೨೬, ೧೮೮೭ ರಂದು ಮಹಾಸಮಾಧಿ ಹೊಂದಿದರು. ಕಾಶೀಕ್ಷೇತ್ರದ ಸಂಪ್ರದಾಯದಂತೆ ಪವಿತ್ರ ಗಂಗೆಯಲ್ಲಿ ಅವರನ್ನು ಜಲಸಮಾಧಿ ಮಾಡಲಾಯಿತು. ನಿಜಕ್ಕೂ ತ್ರೈಲಂಗ ಸ್ವಾಮಿಗಳು ಭಾರತದ ಸಂತರ ಕ್ಷಿತಿಜದಲ್ಲಿ ಒಬ್ಬ ಪ್ರಖರ ನಕ್ಷತ್ರವಾಗಿ ಕಂಗೊಳಿಸುತ್ತಾರೆ.



# ಸೋದರಿ ನಿವೇದಿತಾ ಭಾಗ ೫

ಕಥೆ: ದೇವಪ್ರಸಾದ ಭಟ್ಟಾಚಾರ್ಯ ಅನುವಾದ: ಉಷಾ ಎಸ್. ಮೂರ್ತಿ ಚಿತ್ರ: ಸುನಿತಾ ವಾಸು



















ಕೊಲ್ಕತ್ತೆಗೆ ಮರಳಿದ ಮೇಲೆ ನಂ. 16, ಬೋಸ್‌ಪಾರಾ ಲೇನ್‌ನಲ್ಲಿ ಮನೆ ಸಿಕ್ಕಿತು. ಈ ಮನೆ ಬಾಗ್‌ಬಜಾರ್‌ನಲ್ಲಿದ್ದ ಶ್ರೀಮಾತೆಯವರ ಮನೆಗೆ ಹತ್ತಿರದಲ್ಲಿತ್ತು.


ನೆರೆಹೊರೆಯವರು ಅವಳನ್ನು ತಮ್ಮಲ್ಲಿ ಒಬ್ಬಳೆಂಬಂತೆ ಸ್ವೀಕರಿಸಿದರು.


ಅವರು ಅವಳಿಗೆ ಆಗಾಗ ತಿಂಡಿಗಳನ್ನು ಕೊಡುತ್ತಿದ್ದರು. ಅವಳ ಅತಿಥಿಗಳನ್ನೂ ಸತ್ಕರಿಸುತ್ತಿದ್ದರು.


ಅವರು ಅವಳಲ್ಲಿಗೆ ಬಂದು ಸಾಂತ್ವನವನ್ನು ಪಡೆಯುತ್ತಿದ್ದರು. ಅವಳು ಎಲ್ಲರನ್ನೂ ನಗುನಗುತ್ತಾ ಸ್ವಾಗತಿಸುತ್ತಿದ್ದಳು. ತನಗೆ ಗೊತ್ತಿರುವ ಕೆಲವು ಬಂಗಾಳೀ ಪದಗಳನ್ನು ಬಳಸಿ ಮಾತನಾಡುತ್ತಿದ್ದಳು.


ಅವರಿಗೆ ಆವಶ್ಯಕತೆ ಇದ್ದಾಗಲೆಲ್ಲ ಅವಳು ಸಹಾಯ ಮಾಡಲು ಉತ್ಸುಕಳಾಗಿದ್ದಳು.


ಒಂದು ಸಾಯಂಕಾಲ ಹತ್ತಿರದ ಗುಡಿಸಲಿನಿಂದ ಜೋರಾಗಿ ಅಳುವ ಧ್ವನಿಯೊಂದನ್ನು ಕೇಳಿದಳು.


ಅವಳು ತಕ್ಷಣವೇ ಅಲ್ಲಿಗೆ ಹೋದಳು. ಮಗುವೊಂದು ಸಾಯುವ ಸ್ಥಿತಿಯಲ್ಲಿತ್ತು.


ಮಗು ಮರಣ ಹೊಂದಿದದ ನಂತರ ಅವಳು ಅಲ್ಲಿಯೇ ಇದ್ದು, ಮಗುವಿನ ತಾಯಿಯನ್ನು ಮುಟ್ಟಿ ಸಂತೈಸಿದಳು.


ತಂಗೀ ಕೇಳು! ನಿನ್ನ ಮಗು ತಾಯಿ ಕಾಳಿಯೊಂದಿಗಿದ್ದಾಳೆ. ಚಿಂತಿಸಬೇಡ!


ಕಲ್ಕತ್ತೆಯಲ್ಲಿ ಪ್ಲೇಗ್ ಹರಡಿತು. ಓಣಿಗಳನ್ನು ಶುಚಿಗೊಳಿಸಲು ಯಾರೂ ಇಲ್ಲದ್ದನ್ನು ನೋಡಿ, ತಾನೇ ಒಂದು ಪೊರಕೆ ತೆಗೆದುಕೊಂಡು ಗುಡಿಸಲು ಪ್ರಾರಂಭಿಸಿದಳು.


ಅದನ್ನು ನೋಡಿ ಕೆಲವು ಯುವಕರು ಅವಳಿಗೆ ಸಹಾಯ ಮಾಡಲು ಮುಂದಾದರು.


ನವೆಂಬರ್ 13, 1898 ರ ಕಾಳೀಪೂಜೆಯ ಪವಿತ್ರದಿನದಂದು ತನ್ನ ಮನೆಯಲ್ಲಿಯೇ ಹೆಣ್ಣುಮಕ್ಕಳಿಗಾಗಿ ಶಾಲೆಯೊಂದನ್ನು ತೆರೆದಳು.


ಶ್ರೀಮಾತೆಯವರೇ ಅಲ್ಲಿಗೆ ಬಂದು ಶಾಲೆಯ ಪ್ರಾರಂಭೋತ್ಸವದಲ್ಲಿ ಪಾಲ್ಗೊಂಡು ಆಶೀರ್ವದಿಸಿದರು.


ಸ್ವಾಮಿ ವಿವೇಕಾನಂದರೂ ತಮ್ಮ ಸಹೋದರ ಸಂನ್ಯಾಸಿಗಳೊಡನೆ ಅದರಲ್ಲಿ ಪಾಲ್ಗೊಂಡರು.


ಕಾಳೀಮಾತೆಯ ಸಂಪೂರ್ಣ ಅನುಗ್ರಹ ಈ ಶಾಲೆಯ ಮೇಲಿರಲಿ ಎಂದು ಆಶೀರ್ವದಿಸುತ್ತೇನೆ. ಇಲ್ಲಿ ಶಿಕ್ಷಣ ಪಡೆದ ಮಕ್ಕಳು ಆದರ್ಶಪ್ರಾಯರಾಗಿರುತ್ತಾರೆ.


ಮೊದಲು ಕೆಲವು ಹುಡುಗಿಯರು ಸ್ವಾಮೀಜಿಯವರನ್ನು ಗೌರವಿಸುವ ಕುಟುಂಬಗಳಿಂದ ಬಂದರು.
ನಿವೇದಿತಾ ತನ್ನ ಒಳ್ಳೆಯ ನಡತೆ ಹಾಗೂ ಸ್ವಾರ್ಥರಹಿತ ವರ್ತನೆಯಿಂದ, ನೆರೆಹೊರೆಯ ಸಂಪ್ರದಾಯಬದ್ಧರಾದ ಮಹಿಳೆಯರ ಮನಸ್ಸನ್ನು ಗೆದ್ದಳು.


ಅವಳ ಕೆಲಸದವಳು ಹುಡುಗಿಯರನ್ನು ಶಾಲೆಗೆ ಕರೆತರುತ್ತಿದ್ದಳು. ನಿವೇದಿತಾ ಆ ಚಿಕ್ಕಮಕ್ಕಳಿಗೆ ಓದಲು ಬರೆಯಲು ಹೇಳಿಕೊಡುತ್ತಿದ್ದಳು. ಚಿತ್ರಕಲೆ, ಹೊಲಿಗೆ, ಮಣ್ಣಿನ ಬೊಂಬೆಗಳನ್ನು ಮಾಡುವುದನ್ನು ಕಲಿಸುತ್ತಿದ್ದಳು.
ಆ ಶಾಲೆಯು ಮಕ್ಕಳಿಗೆ ತುಂಬಾ ಇಷ್ಟವಾಯಿತು. ಅದನ್ನು ನೋಡಿ ನಿವೇದಿತಾ ಸಂತೋಷ ಪಟ್ಟಳು.
ಮುಂದಿನ ಸಂಚಿಕೆಗೆ..





# ರಾಮಕೃಷ್ಣ-ವಿವೇಕಾನಂದ ಭಾವಪ್ರಚಾರ ಪರಿಷತ್ತಿನ ೩ನೇ ವಾರ್ಷಿಕ ಸಮ್ಮೇಳನ

ಕರ್ನಾಟಕ ರಾಜ್ಯದ ರಾಮಕೃಷ್ಣ-ವಿವೇಕಾನಂದ ಭಾವಪ್ರಚಾರ ಪರಿಷತ್ತಿನ ಮೂರನೇ ರಾಜ್ಯಮಟ್ಟದ ಸಮ್ಮೇಳನ ಧಾರವಾಡದ ರಾಮಕೃಷ್ಣ ವಿವೇಕಾನಂದ ಆಶ್ರಮದಲ್ಲಿ ೨೦೧೬ರ ಡಿಸೆಂಬರ್ ೨೯, ೩೦ ಹಾಗೂ ೩೧ ರಂದು ನಡೆಯಿತು. ಸಮಾವೇಶದ ಮೊದಲ ದಿನ ಬೆಳಿಗ್ಗೆ ೮-೩೦ ರಿಂದ ಶ್ರೀರಾಮಕೃಷ್ಣರ ಭಾವಚಿತ್ರವನ್ನ ಹೊತ್ತ ಆನೆ, ವಾದ್ಯಗಳೊಂದಿಗೆ ಶೋಭಾಯಾತ್ರೆ ನಡೆಯಿತು. ಪೂರ್ಣಕುಂಭವನ್ನು ಹೊತ್ತ ನೂರಾರು ಮಂದಿ ತಾಯಂದಿರು, ಸುಮಾರು ೧೦೦೦ ಕಾಲೇಜು ವಿದ್ಯಾರ್ಥಿಗಳು ಹಾಗು ಸಾರ್ವಜನಿಕರು ಇದರಲ್ಲಿ ಭಾಗ ವಹಿಸಿದ್ದರು. ಕೇಂದ್ರ ಸಚಿವ ಶ್ರೀ ರಮೇಶ ಜಿಗಜಿಣಗಿ ಅವರು ಸಮ್ಮೇಳನವನ್ನು ಉದ್ಘಾಟಿಸಿದರು. ರಾಮಕೃಷ್ಣ ಮಠ ಮತ್ತು ಮಿಷನ್ನಿನ ಟ್ರಸ್ಟಿಗಳು ಹಾಗೂ ಅಖಿಲ ಭಾರತ ಭಾವಪ್ರಚಾರ ಪರಿಷತ್ತಿನ ಮುಖ್ಯಸ್ಥರಾದ ಪೂಜ್ಯ ಸ್ವಾಮಿ ಗಿರೀಶಾನಂದಜಿ ಮಹಾರಾಜ್ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಸಮ್ಮೇಳನದ ಮೊದಲ ಅರ್ಧ ದಿನ ಆಯೋಜಿಸಲಾಗಿದ್ದ **ಯುವ ಸಮಾವೇಶದಲ್ಲಿ** ಸುಮಾರು ೫೫೦೦ಕ್ಕೂ ಹೆಚ್ಚು ಯುವಕರು ಭಾಗ ವಹಿಸಿದ್ದರು. ಶ್ರೀ ಚಕ್ರವರ್ತಿ ಸೂಲಿಬೆಲೆ ಹಾಗೂ ಶ್ರೀ ಹರ್ಷವರ್ಧನ ಶೀಲವಂತ ಅವರು ಪ್ರಧಾನ ಉಪನ್ಯಾಸ ಮಾಡಿದರು. ಮೂರು ದಿನದ ಸಮ್ಮೇಳನದಲ್ಲಿ '**ಶ್ರೀ ರಾಮಕೃಷ್ಣ ಚಿಂತನಧಾರೆ**', '**ಶ್ರೀಶಾರದಾ ದೇವಿ ಚಿಂತನಧಾರೆ**' ಹಾಗೂ '**ಸ್ವಾಮಿ ವಿವೇಕಾನಂದರ ಚಿಂತನಧಾರೆ**' ಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು. ಗೋಷ್ಠಿಗಳಲ್ಲಿ ಧಾರವಾಡದ ಜಿಲ್ಲಾ ಪ್ರಧಾನ ಮತ್ತು ಸತ್ರ ನ್ಯಾಯಾಧೀಶರಾದ ಶ್ರೀ ವಿ. ಶ್ರೀಶಾನಂದ, ಧಾರವಾಡದ ಉಪನ್ಯಾಸಕರಾದ ಡಾ. ಪ್ರಜ್ಞಾ ಮತ್ತಿಹಳ್ಳಿ ಹಾಗೂ ಉಡುಪಿಯ ಖ್ಯಾತ ವಾಗ್ಮಿ ಶ್ರೀ ಪ್ರಕಾಶ ಮಲ್ಪೆ, ತಮಿಳುನಾಡಿನ ಉದಕಮಂಡಲದ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ರಾಘವೇಶಾನಂದಜಿ, ವಿಶಾಖಪಟ್ಟಣಂ ರಾಮಕೃಷ್ಣ ಮಿಷನ್ ಆಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮವಿದಾನಂದಜಿ, ಮಂಗಳೂರು ರಾಮಕೃಷ್ಣ ಮಿಷನ್ನಿನ ಅಧ್ಯಕ್ಷರಾದ ಸ್ವಾಮಿ ಜಿತಕಾಮಾನಂದಜಿ, ಮುಂಬೈ ರಾಮಕೃಷ್ಣ ಮಿಷನ್ನಿನ ಅಧ್ಯಕ್ಷರು ಹಾಗೂ ರಾಮಕೃಷ್ಣ ಮಠ, ಮಿಷನ್ನಿನ ಟ್ರಸ್ಟಿಗಳಾದ ಸ್ವಾಮಿ ಮುಕ್ತಿದಾನಂದಜಿ, ಮೈಸೂರು ರಾಮಕೃಷ್ಣ ಆಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮಜ್ಞಾನಂದಜಿ, ಪೊನ್ನಂಪೇಟೆ ರಾಮಕೃಷ್ಣ ಶಾರದಾಶ್ರಮದ ಅಧ್ಯಕ್ಷರಾದ ಸ್ವಾಮಿ ಬೋಧಸ್ವರೂಪಾನಂದಜಿ, ತುಮಕೂರಿನ ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷರಾದ ಸ್ವಾಮಿ ವೀರೇಶಾನಂದ ಸರಸ್ವತಿ, ಗದಗ-ವಿಜಯಪುರ ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷರಾದ ಸ್ವಾಮಿ ನಿರ್ಭಯಾನಂದ ಸರಸ್ವತಿ, ತಿರುಪತಿ ರಾಮಕೃಷ್ಣ ಮಿಷನ್ನಿನ ಕಾರ್ಯದರ್ಶಿಗಳಾದ ಸ್ವಾಮಿ ಅನುಪಮಾನಂದಜಿ, ಬೆಂಗಳೂರು ರಾಮಕೃಷ್ಣ ಆಶ್ರಮದ ಸ್ವಾಮಿ ಸ್ವಾತ್ಮಾರಾಮಾನಂದಜಿ, ಶಿವನಹಳ್ಳಿ ರಾಮಕೃಷ್ಣ ಆಶ್ರಮದ ಸ್ವಾಮಿ ಸೌಖ್ಯಾನಂದಜಿ ಹಾಗೂ ಇನ್ನಿತರ ಸಾಧುಗಳು ಹಾಗೂ ಮಾತಾಜಿಗಳು ಪ್ರವಚನ ನೀಡಿದರು. ಇವರಲ್ಲದೆ ಧಾರವಾಡ ಜಿಲ್ಲೆಯ ಅನೇಕ ಮಠಾಧೀಶರು ಸಮ್ಮೇಳನದಲ್ಲಿ ಉಪಸ್ಥಿತರಿದ್ದರು. ಹೊರ ರಾಜ್ಯಗಳಿಂದ, ರಾಜ್ಯದ ಹಲವು ಜಿಲ್ಲೆಗಳಿಂದ ಬಂದ ಹಾಗೂ ಸ್ಥಳೀಯರಾದ ೩೦೦೦ಕ್ಕಿಂತಲೂ ಹೆಚ್ಚು ಜನ ಭಕ್ತ ಪ್ರತಿನಿಧಿಗಳು ಭಾಗ ವಹಿಸಿದ್ದರು. ಮೂರು ದಿವಸಗಳು ಮಧ್ಯಾಹ್ನ ಪ್ರಸಾದದ ನಂತರ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಸಂಜೆ ಆರಾತ್ರಿಕದ ನಂತರ ಕೇರಳದ ೧೧ ವರ್ಷದ ಗಾಯಕಿ ಕುಮಾರಿ ಸೂರ್ಯಗಾಯತ್ರಿ, ಖ್ಯಾತ ಹಿಂದೂಸ್ತಾನಿ ಗಾಯಕ ಪಂಡಿತ್ ಜಯತೀರ್ಥ ಮೇವುಂಡಿ ಹಾಗೂ ಕೊನೆಯ ದಿನ ಕೊಲ್ಹಾಪುರದ ಶ್ರೀ ಶುಕ್ಲಾ ಹಾಗೂ ಸಂಗಡಿಗರಿಂದ '**ಜಾಗೋ ಹಿಂದೂಸ್ತಾನ್**' ಕಾರ್ಯಕ್ರಮ ಜರುಗಿತು. ಮೂರು ದಿನಗಳಲ್ಲೂ ಬೆಳಿಗ್ಗೆ ೬.೩೦ ರಿಂದ ೮.೩೦ರ ವರೆಗೆ ಸಂಕೀರ್ತನ ಸತ್ಸಂಗ ಹಾಗೂ ಯೋಗ-ಧ್ಯಾನ ತರಗತಿಗಳನ್ನು ಏರ್ಪಡಿಸಲಾಗಿತ್ತು.

ದಿನಾಂಕ ೩೦ರಂದು ಲೋಕ ಕಲ್ಯಾಣಾರ್ಥವಾಗಿ ಶ್ರೀರಾಮಕೃಷ್ಣ ಹೋಮ ಜರುಗಿತು . ನಂತರ ಆಶ್ರಮದ ಭಕ್ತರಿಂದ ಯತಿಪೂಜೆ ನೆರವೇರಿತು. ಸಮ್ಮೇಳನದಲ್ಲಿ ಭಾಗವಹಿಸಿದ ಹೊರಊರಿನ ಪ್ರತಿನಿಧಿಗಳಿಗೆ ವಸತಿ, ಸಂಚಾರ ಹಾಗೂ ಊಟೋಪಚಾರ ವ್ಯವಸ್ಥೆ ಮಾಡಲಾಗಿತ್ತು.







# ಶ್ರೀ ಶಾರದಾ ಜ್ಞಾನಸುಧಾ ೨೦೧೬

**ಮೈ**ಸೂರಿನ ಶ್ರೀರಾಮಕೃಷ್ಣ ಆಶ್ರಮವು ಆಯೋಜಿಸಿದ್ದ **''ಶಾರದಾ ಜ್ಞಾನಸುಧಾ ೨೦೧೬ ರಸಪ್ರಶ್ನೆ ಕಾರ್ಯಕ್ರಮ''**ದ ಬಹುಮಾನ ವಿತರಣಾ ಸಮಾರಂಭವನ್ನು ಡಿಸೆಂಬರ್ ೩೧, ೨೦೧೬ ರಂದು ಸಾಯಂಕಾಲ ಆಶ್ರಮದ ಸಭಾಂಗಣದಲ್ಲಿ ನಡೆಸಲಾಯಿತು. ಆಶ್ರಮದ ಅಧ್ಯಕ್ಷರಾದ ಪೂಜ್ಯ ಸ್ವಾಮಿ ಆತ್ಮಜ್ಞಾನಂದಜಿ ಹಾಗೂ ವಿದ್ಯಾಶಾಲೆಯ ಪೂಜ್ಯ ಸ್ವಾಮಿ ಯುಕ್ತೇಶಾನಂದಜಿಯವರು ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡು ವಿಜೇತರಿಗೆ ಬಹುಮಾನ ವಿತರಿಸಿದರು.

ರಾಜ್ಯಮಟ್ಟದಲ್ಲಿ ನಡೆಸಲಾಗಿದ್ದ ಈ ರಸಪ್ರಶ್ನೆ ಕಾರ್ಯಕ್ರಮದಲ್ಲಿ ಸುಮಾರು ೩೩೦ ಶಾಲಾ ಕಾಲೇಜುಗಳಿಂದ ೩೦,೦೦೦ ಕ್ಕೂ ಹೆಚ್ಚು ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಪಾಲ್ಗೊಂಡಿದ್ದರು. ಕಳೆದ ೧೩ ವರ್ಷಗಳಿಂದ ನಡೆಸಲಾಗುತ್ತಿರುವ ಈ ಕಾರ್ಯಕ್ರಮದಲ್ಲಿ ಇಲ್ಲಿಯವರೆಗೆ ೭,೪೫,೦೦೦ ವಿದ್ಯಾರ್ಥಿಗಳು ಭಾಗವಹಿಸಿದ್ದಾರೆ. ದಿವ್ಯತ್ರಯರ ಜೀವನ-ಸಂದೇಶ, ವ್ಯಕ್ತಿತ್ವ ನಿರ್ಮಾಣ, ಧ್ಯಾನ ಮತ್ತು ಏಕಾಗ್ರತೆ, ಧರ್ಮ, ರಾಷ್ಟ್ರ ನಿರ್ಮಾಣ ಮೊದಲಾದ ಹಲವಾರು ವಿಷಯಗಳ ಮೇಲಿನ ಪ್ರಶ್ನೆಗಳನ್ನೊಳಗೊಂಡ ಪ್ರಶ್ನೆಪತ್ರಿಕೆಗಳಿಗೆ ಈ ವಿದ್ಯಾರ್ಥಿಗಳು ಉತ್ತರಿಸಿದ್ದಾರೆ. ಈ ವರ್ಷ ಸೋದರಿ ನಿವೇದಿತಾ ಅವರ ೧೫೦ ನೇ ಜನ್ಮಮಹೋತ್ಸವದ ವರ್ಷಾಚರಣೆಯ ಅಂಗವಾಗಿ **''ನಿವೇದಿತಾ-ಜೀವನ ಸಂದೇಶ''** ಎನ್ನುವ ಪುಸ್ತಕದ ಮೇಲೆಯೂ ರಸಪ್ರಶ್ನೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು.

# ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ ವಾರ್ಷಿಕ ವರದಿಯ ಸಾರಾಂಶ - 2015-2016

ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ **೧೦೭-ನೇ ವಾರ್ಷಿಕ ಸಾಧಾರಣ ಸಭೆಯು** ರವಿವಾರ, ದಿನಾಂಕ ೧೮ನೇ ಡಿಸೆಂಬರ್ ೨೦೧೬ ರಂದು ಮಧ್ಯಾಹ್ನ ೩.೩೦ ಕ್ಕೆ ಬೇಲೂರು ಮಠದಲ್ಲಿ ನೆರವೇರಿತು.

ಪಶ್ಚಿಮ ಬಂಗಾಳ ಸರ್ಕಾರವು ರಾಮಕೃಷ್ಣ ಮಿಷನ್ನನ್ನು ಅದು ಮಾಡುತ್ತಿರುವ ಸಾಮಾಜಿಕ ಉನ್ನತಿಯ ಸೇವಾಕಾರ್ಯಗಳಿಗಾಗಿ **'ವಂಗ ವಿಭೂಷಣ ಪ್ರಶಸ್ತಿ -೨೦೧೫'**ಕ್ಕೆ ಆಯ್ಕೆ ಮಾಡಿದೆ. ಸ್ವಾಮಿ ವಿವೇಕಾನಂದರ ೧೫೦ ನೇ ಜನ್ಮ ಶತಮಾನೋತ್ಸವದ ಅಂಗವಾಗಿ ರಾಮಕೃಷ್ಣ ಮಹಾಸಂಘದ ಪ್ರಧಾನಕೇಂದ್ರದ ಯೋಜನೆಯ ಅಡಿಯಲ್ಲಿ ತಯಾರಿಸಲಾದ 'Sound of Joy' ಎಂಬ ಸ್ವಾಮೀಜಿ ಬಾಲ್ಯದ ದಿನಗಳನ್ನು ಕುರಿತ ಅನಿಮೇಷನ್ ಚಲನಚಿತ್ರವು ೬೨ನೇ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಯ ಸಮಿತಿ ಪ್ರಕಾರ 'ಅತ್ಯುತ್ತಮ ಅನಿಮೇಷನ್ ಚಿತ್ರ' ವೆಂದು ಪರಿಗಣಿಸಲಾಯಿತು.

ಸ್ವಾಮಿ ಶಾರದಾನಂದ, ಸ್ವಾಮಿ ತ್ರಿಗುಣಾತೀತಾನಂದ ಹಾಗೂ ಸೋದರಿ ನಿವೇದಿತಾ ಅವರ ೧೫೦ನೇ ಜನ್ಮ ಶತಮಾನೋತ್ಸವವನ್ನು ವಿವಿಧ ಶಾಖಾಕೇಂದ್ರ ಗಳಲ್ಲಿ ಹಲವು ಕಾರ್ಯಕ್ರಮಗಳೊಂದಿಗೆ ಆಚರಿಸಲಾಯಿತು.

ಪಶ್ಚಿಮ ಬಂಗಾಳದ **ಗುರಪ್**, ಮಣಿಪುರದ **ಇಂಫಾಲ್**, ತ್ರಿಪುರಾದ **ಕೈಲಾಸ್‌ಶಹರ್** ಹಾಗೂ ಆಂಧ್ರಪ್ರದೇಶದ **ತಿರುಪತಿ**ಯಲ್ಲಿ ರಾಮಕೃಷ್ಣ ಮಿಷನ್ನಿನ ಹೊಸ ಶಾಖಾಕೇಂದ್ರಗಳು ಆರಂಭವಾದವು. **ಬಾಮುನ್‌ಮುರಾ** ಹಾಗೂ **ಮೇಖಲಿಗಂಜ್** ಗಳಲ್ಲಿನ ಉಪ-ಕೇಂದ್ರಗಳನ್ನು ರಾಮಕೃಷ್ಣ ಮಠದ ಪ್ರತ್ಯೇಕ ಕೇಂದ್ರಗಳನ್ನಾಗಿ ಪರಿಗಣಿಸಲಾಯಿತು. ಬೇಲೂರು ಮಠ ಪ್ರಧಾನ ಕೇಂದ್ರದ ಮೇಲ್ವಿಚಾರಣೆಯಲ್ಲಿದ್ದ **ಲಾಲ್‌ಘರ್** ಆಶ್ರಮವನ್ನು ಕೂಡ ಮಠದ ಪ್ರತ್ಯೇಕ ಕೇಂದ್ರವನ್ನಾಗಿ ಮಾಡಲಾಯಿತು. ಹೊರದೇಶದಲ್ಲಿ, ಬಾಂಗ್ಲಾದೇಶದ **ರಂಗಪುರ**ದಲ್ಲಿ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಹೊಸ ಕೇಂದ್ರವನ್ನು ಆರಂಭಿಸಲಾಯಿತು.

**ಶೈಕ್ಷಣಿಕ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಪ್ರಗತಿಗಳು** ಉಲ್ಲೇಖನೀಯ:

(೧) **ಕೊಯಮತ್ತೂರು ಮಿಷನ್** ಮೂರನೇ ವರ್ಷದ ವಿದ್ಯಾರ್ಥಿಗಳಿಗಾಗಿ *ಪ್ರಧಾನ ಮಂತ್ರಿ ಕೌಶಲ ವಿಕಾಸ ಯೋಜನೆ* (PMKVY) ಯನ್ವಯ ಮೂರು ಅಲ್ಪಕಾಲಿಕ ಆಡ್-ಆನ್ ಕೋರ್ಸ್, ವೃತ್ತಿಪರ ಸ್ನಾತಕ ಪದವಿ ಕೋರ್ಸ್ ಹಾಗೂ 'IJAPEY' (International Journal of Adapted Physical Education and Yoga) ಎಂಬ ಅಂತರ್ಜಾಲ ಮಾಸಪತ್ರಿಕೆ - ಇವುಗಳನ್ನು ಆರಂಭಿಸಿತು. (೨) ಕಲ್ಕತ್ತಾದ **ನರೇಂದ್ರಪುರ** ಕೇಂದ್ರದಲ್ಲಿ ಎಂ.ಫಿಲ್, ಪಿಹೆಚ್.ಡಿ. ಕೋರ್ಸುಗಳಿಗಾಗಿ 'ವಿವೇಕಾನಂದ ಸಂಶೋಧನ ಕೇಂದ್ರ'ವನ್ನು ಆರಂಭಿಸಲು ಕಲ್ಕತ್ತಾ ವಿಶ್ವವಿದ್ಯಾಲಯವು ಅನುಮತಿ ನೀಡಿದೆ. (೩) ಕಲ್ಕತ್ತಾದ **ರಹರಾ** ಕೇಂದ್ರದ ವಿವೇಕಾನಂದ ಶತಮಾನೋತ್ಸವ ಕಾಲೇಜಿನಲ್ಲಿ 'ಸ್ವಾಮಿ ವಿವೇಕಾನಂದ ಮೂಲಭೂತ ವಿಜ್ಞಾನ ಹಾಗೂ ಸಮಾಜ ವಿಜ್ಞಾನಗಳ ಅಂತರ್ಶಿಸ್ತೀಯ ಸಂಶೋಧನ ಕೇಂದ್ರ' ಕಾರ್ಯ ನಿರ್ವಹಿಸತೊಡಗಿತು. (೪) **ರಾಂಚಿ ಮೊರಾಬಾದಿ** ಕೇಂದ್ರವು ರಾಷ್ಟ್ರೀಯ ಮುಕ್ತ ವಿದ್ಯಾಲಯ(NIOS)ದೊಂದಿಗೆ ಸಂಲಗ್ನವಾಗಿರುವಂತೆ ಸೆಕೆಂಡರಿ ಹಾಗೂ ಸೀನಿಯರ್ ಸೆಕೆಂಡರಿ ಕೋರ್ಸ್‌ಗಳನ್ನು ಆರಂಭಿಸಿತು.

**ವೈದ್ಯಕೀಯ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಪ್ರಗತಿಗಳು** ಉಲ್ಲೇಖನೀಯ:

(೧) **ಅಗರ್ತಲಾ** ಕೇಂದ್ರವು NUHM ಅಡಿಯಲ್ಲಿ ಅಗರ್ತಲಾ ನಗರಸಭೆಯ ಕೊಳೆಗೇರಿಗಳಲ್ಲಿ ದೂರಸಂಚಾರಿ ವೈದ್ಯಕೀಯ ಶಿಬಿರಗಳನ್ನು ನಡೆಸಿತು.(೨) **ಲಕ್ನೋ** ಕೇಂದ್ರದ ಆಸ್ಪತ್ರೆಯಲ್ಲಿ ಟೆಲಿಮೆಡಿಸಿನ್ ಸೌಲಭ್ಯವನ್ನು ತೆರೆಯಲಾಯಿತು. (೩) ಕೊಲ್ಕತ್ತಾದ **ಸೇವಾ ಪ್ರತಿಷ್ಠಾನ**ದಲ್ಲಿ ಆರು ಅಂತಸ್ತುಗಳಿರುವ ಡಯಾಗ್ನೊಸ್ಟಿಕ್ ಹಾಗೂ ಕಾರ್ಡಿಯಾಕ್ ಕೇರ್ ಸೆಂಟರ್ ಕಟ್ಟಡವನ್ನು ನಿರ್ಮಿಸಲಾಯಿತು. ಇದರಲ್ಲಿ ಕ್ಯಾಥಟರೈಸೇಷನ್ ಲ್ಯಾಬ್, ಸಿಸಿಯು, ಹೆಚ್‌ಡಿಯು, ಸಿಟಿವಿಎಸ್-ಐಟಿಯು ಇವುಗಳೂ ಸೇರಿವೆ. ಕೇಂದ್ರವು 'ಎಮರ್ಜನ್ಸಿ ಟ್ರೌಮಾ ಕೇರ್ ಲೈಫ್ ಸಪೋರ್ಟ್' ಕೋರ್ಸ್ ಆರಂಭಿಸಿತು.

**ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಯೋಜನೆಗಳು** ಉಲ್ಲೇಖನೀಯ:

(೧) **ನಾರಾಯಣಪುರ** ಕೇಂದ್ರವು ೧೦ ಅಂಗನವಾಡಿ ಕೇಂದ್ರಗಳನ್ನು ಏಕ-ಅಧ್ಯಾಪಕ ಪೂರ್ವ-ಬುನಾದಿ ಶಾಲೆ (ಏಕಲ್ ವಿದ್ಯಾಲಯ)ವಾಗಿ ಪರಿವರ್ತಿಸಿದೆ. (೨) ಕಲ್ಕತ್ತಾದ **ನರೇಂದ್ರಪುರ** ಕೇಂದ್ರವು ಪುರುಲಿಯಾ ಜಿಲ್ಲೆಯ ಸಂತೂರಿ ಗ್ರಾಮದಲ್ಲಿ ಗ್ರೀನ್ ಸೆಕ್ಟರ್‌ನ ಹತ್ತು ಹಲವು ಸಮಸ್ಯೆಗಳಿಗೆ ಸಂಬಂಧಿಸಿದಂತೆ ೧೨ ಕೋರ್ಸ್‌ಗಳನ್ನು ಒಳಗೊಂಡ ಗ್ರೀನ್ ಕಾಲೇಜನ್ನು ಆರಂಭಿಸಿದೆ. (೩) **ಪುರುಲಿಯಾ ವಿದ್ಯಾಪೀಠ**ವು ೮ ಹಳ್ಳಿಗಳಲ್ಲಿ ೧೧ ಕೊಳವೆ ಬಾವಿಗಳನ್ನು ತೆಗೆಸಿದೆ, ಹಾಗೂ ೬ ಕೃಷಿ ಶಿಬಿರಗಳನ್ನು ನಡೆಸಿದೆ. (೪) **ರಾಂಚಿ** (ಮೊರಾಬಾದಿ) ಕೇಂದ್ರವು ೭ ರಿಚಾರ್ಜ್ ಟ್ಯಾಂಕುಗಳನ್ನೂ, ೨೭ ಪರ್ಕೊಲೇಶನ್ ಟ್ಯಾಂಕುಗಳನ್ನೂ, ೧ ಗುರುತ್ವಾಕರ್ಷಣ ನೀರಾವರಿ ವ್ಯವಸ್ಥೆಯನ್ನೂ, ಮಣ್ಣು-ನೀರು ಸಂರಕ್ಷಣೆಗಾಗಿ ೨ 'ಬೊರಾ-ಬಂದ್'ಗಳನ್ನೂ ಸ್ಥಾಪಿಸಿದೆ. (೫) **ಸರ್ಗಾಛಿ** ಕೇಂದ್ರವು ಉನ್ನತ ಮೌಲ್ಯದ ಬೆಳೆಗಳ ಅಭಿವೃದ್ಧಿ ಹಾಗೂ ಪ್ರದರ್ಶನಕ್ಕಾಗಿ ಗ್ರೀನ್‌ಹೌಸ್ (ಪೊಲಿ ಹೌಸ್) ಹಾಗೂ ಬೀಜದ ಬಲೆ-ಮನೆ (ಸೀಡ್ ನೆಟ್ ಹೌಸ್)ಯನ್ನು ನಿರ್ಮಿಸಿದೆ. (೬) **ಸಿಲ್‌ಚಾರ್** ಕೇಂದ್ರವು ಕಾಚಾರ್ ಜಿಲ್ಲೆಯ ಮಾಯ್ನಘರ್ ಗ್ರಾಮದಲ್ಲಿ ಮಹಿಳೆಯರಿಗಾಗಿ ಹೊಲಿಗೆ ತರಬೇತಿ ಕೇಂದ್ರವನ್ನು ಆರಂಭಿಸಿದೆ.

ಹಲವು ಶಾಖಾಕೇಂದ್ರಗಳು **ಸ್ವಚ್ಛ ಭಾರತ ಅಭಿಯಾನ** (ಕೇಂದ್ರ ಸರಕಾರ ಹಮ್ಮಿಕೊಂಡಿರುವ ಯೋಜನೆ) ವನ್ನು ಇನ್ನಷ್ಟು ವ್ಯಾಪಕ ಗೊಳಿಸಿವೆ. ಸ್ವಚ್ಛತೆಯನ್ನು ಕುರಿತ ಈ ವಿವಿಧ ಕಾರ್ಯಚಟುವಟಿಕೆಗಳಲ್ಲಿ ಉಲ್ಲೇಖನೀಯವಾದವು: (೧) **ಚೆನ್ನೈ ಸ್ಟೂಡೆಂಟ್ಸ್ ಹೋಮ್**ನ ಪಾಲಿಟೆಕ್ನಿಕ್ ವಿಭಾಗವು ವಿವಿಧ ಬೀದಿಗಳಲ್ಲಿ೫ ಸ್ವಚ್ಛತಾ ಕಾರ್ಯಗಳನ್ನು ನಡೆಸಿತು; ಇತರ ಸಾರ್ವಜನಿಕ ಸ್ಥಳಗಳೂ ಸ್ವಚ್ಛಗೊಂಡವು. (೨) **ಮಂಗಳೂರು** ಶಾಖಾಕೇಂದ್ರವು *ಸ್ವಚ್ಛ ಮಂಗಳೂರು* ಎಂಬ ಸ್ವಚ್ಛತಾ ಕಾರ್ಯಕ್ರಮವನ್ನು ೨೦೧೫ರ ಫೆಬ್ರುವರಿ ೧ರಂದು ಆರಂಭಿಸಿದ್ದು, ಅದರ ಮೊದಲ ಹಂತದಲ್ಲಿ ನಗರದ ೪೦ ಪ್ರದೇಶಗಳಲ್ಲಿ ೪೦ ವಿವಿಧ ಕಾರ್ಯಕ್ರಮಗಳನ್ನು ನಡೆಸಿತು. (೩) **ನರೇಂದ್ರಪುರ** ಕೇಂದ್ರದ ಲೋಕಶಿಕ್ಷಾ ಪರಿಷತ್ ಯೂನಿಸೆಫ್ ಸಹಕಾರದಿಂದ ಪುರುಲಿಯಾದಲ್ಲಿ WASH (Water, Sanitation and Hydiene)ಎಂಬ ಕಾರ್ಯಕ್ರಮವನ್ನು ನಡೆಸಿತು.

**ರಾಮಕೃಷ್ಣ ಮಠಕ್ಕೆ ಸಂಬಂಧಿಸಿದಂತೆ ಈ ಕೆಳಗಿನ ಹೊಸ ಯೋಜನೆಗಳು ಉಲ್ಲೇಖನೀಯ:**

(೧) **ಬಾಗ್‌ಬಝಾರ್**(ಪಶ್ಚಿಮ ಬಂಗಾಳ) ಮಠವು ಕೊಲ್ಕತ್ತಾದ ಪ್ರಾಣಕೃಷ್ಣ ಮುಖರ್ಜಿ ಲೇನ್‌ನಲ್ಲಿ ನಿರ್ಮಿಸಿದ ವೊಕೇಶನಲ್ ಟ್ರೇನಿಂಗ್ ಹಾಗೂ ಪ್ರೊಡಕ್ಷನ್ ಸೆಂಟರ್ ಉದ್ಘಾಟನೆಗೊಂಡಿತು. (೨) **ಚೆನ್ನೈ** ಮಠದ *ವಿವೇಕಾನಂದರ್ ಇಲ್ಲಂ* (ವಿವೇಕಾನಂದರ ಮನೆ) ನಲ್ಲಿ ಭಾರತದ ಸಾಂಸ್ಕೃತಿಕ ಇತಿಹಾಸ ವನ್ನು ಕುರಿತ ಹೊಲೋಗ್ರಾಫಿಕ್ ಚಲನಚಿತ್ರವೊಂದನ್ನು ಬಿಡುಗಡೆ ಮಾಡಲಾಯಿತು. (೩) **ಘಾಟ್‌ಶಿಲಾ** ಮಠವು ವೈದ್ಯಕೀಯ ಕಟ್ಟಡವೊಂದನ್ನು ನಿರ್ಮಿಸಿದೆ. (೪) **ಗೌರಹಾಟಿ** ಮಠವು ವೈದ್ಯಕೀಯ ಕಟ್ಟಡವೊಂದನ್ನು ನಿರ್ಮಿಸಿತು. (೫) **ತಿರುವನಂತಪುರ** ಕೇಂದ್ರವು ತನ್ನ ಆಸ್ಪತ್ರೆ ಕಟ್ಟಡವನ್ನು ನವೀಕರಿಸಿತು; ಹೊಸದಾಗಿ ಪಂಚಕರ್ಮ ಕೇಂದ್ರ ಹಾಗೂ ಕಳರಿ (ಸಾಂಪ್ರದಾಯಿಕ ಚಿಕಿತ್ಸಾ ಪದ್ಧತಿ) ಇವುಗಳನ್ನು ಆಯುರ್ವೇದ ವಿಭಾಗದಲ್ಲಿ ಆರಂಭಿಸಿತು.(೬) **ಆಂಟ್‌ಪುರ, ಬಾಗ್‌ಬಜಾರ್** ಹಾಗೂ **ನಾಗಪುರ** ಕೇಂದ್ರಗಳು *ಸ್ವಚ್ಛ ಭಾರತ ಅಭಿಯಾನ* (ಕೇಂದ್ರ ಸರಕಾರ ಹಮ್ಮಿಕೊಂಡಿರುವ ಯೋಜನೆ)ವನ್ನು ವಿವಿಧ ಕಾರ್ಯಚಟುವಟಿಕೆಗಳೊಂದಿಗೆ ಮುನ್ನಡೆಸಿದವು.

**ಭಾರತದ ಹೊರಗೆ** ಈ ಕೆಳಗಿನ **ಹೊಸ ಯೋಜನೆಗಳು** ವಿಶೇಷವಾಗಿ ಉಲ್ಲೇಖನೀಯ:

(೧) ಬಾಂಗ್ಲಾದೇಶದಲ್ಲಿ *ರಾಮಕೃಷ್ಣ-ವಿವೇಕಾನಂದ ಭಾವ ಪ್ರಸಾರ ಸಂಸದ್* ಆರಂಭವಾಯಿತು. **ಢಾಕಾ** ಕೇಂದ್ರವು ತನ್ನ ಹೈಸ್ಕೂಲಿನ ಶತಮಾನೋತ್ಸವದ ಸಮಾರೋಪ ಸಮಾರಂಭವನ್ನು ನೆರವೇರಿಸಿತು.(೨) **ಸಿಂಗಾಪುರ**ದ ಶಾರದಾ ಕಿಂಡರ್‌ಗಾರ್ಟನ್‌ಗೆ ಸಿಂಗಾಪುರ ಸರ್ಕಾರದ ಸಂಪರ್ಕ ಹಾಗು ಮಾಹಿತಿ ಸಚಿವಾಲಯದ ರಾಷ್ಟ್ರೀಯ ಗ್ರಂಥಾಲಯ ಸಮಿತಿಯು 'ರೀಡಿಂಗ್ ಇನೊವೇಷನ್ ಅವಾರ್ಡ್' ಪ್ರಶಸ್ತಿಯನ್ನು ನೀಡಿತು. (೩) **ಮಲೇಷ್ಯಾ** ಕೇಂದ್ರದಲ್ಲಿ ಭಾರತದ ಪ್ರಧಾನ ಮಂತ್ರಿಗಳಾದ ಶ್ರೀ ನರೇಂದ್ರ ಮೋದಿಯವರು ಸ್ವಾಮಿ ವಿವೇಕಾನಂದರ ಕಂಚಿನ ಪ್ರತಿಮೆಯನ್ನು ಅನಾವರಣ ಮಾಡಿದರು.

ಈ ವರ್ಷದ ಅವಧಿಯಲ್ಲಿ **ರಾಮಕೃಷ್ಣ ಮಠ ಮತ್ತು ಮಿಷನ್ ಸಮಾಜ ಕಲ್ಯಾಣ ಕಾರ್ಯಕ್ರಮಗಳ** ಅಡಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ವೃದ್ಧರಿಗೆ, ರೋಗಿಗಳಿಗೆ ಹಾಗೂ ನಿರ್ಗತಿಕರಿಗೆ ಆರ್ಥಿಕ ನೆರವು ಇತ್ಯಾದಿಗಳನ್ನು ನೀಡಲಾಯಿತು (ಸುಮಾರು ೨೨.೭೦ ಲಕ್ಷ ಫಲಾನುಭವಿಗಳಿಗೆ); ಇವುಗಳಿಗೆ ೧೬.೮೫ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ.

**ವೈದ್ಯಕೀಯ ಸೇವೆ**ಗಳನ್ನು ೬೧.೦೨ ಲಕ್ಷಕ್ಕಿಂತ ಹೆಚ್ಚು ಜನರಿಗೆ ೧೦ ಆಸ್ಪತ್ರೆಗಳು, ೭೭ ಚಿಕಿತ್ಸಾಲಯಗಳು, ೪೨ ಸಂಚಾರಿ ವೈದ್ಯಕೀಯ ಘಟಕಗಳು ಹಾಗೂ ೯೧೦ ವೈದ್ಯಕೀಯ ಶಿಬಿರಗಳ ಮೂಲಕ ೧೯೧.೪೮ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನೀಡಲಾಯಿತು.

**ಶೈಕ್ಷಣಿಕ ಕಾರ್ಯಕ್ರಮಗಳಿಗೆ** ಮೊತ್ತ ೨೮೪.೯೬ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ. ಅಸಾಂಪ್ರದಾಯಿಕ ಶಿಕ್ಷಣ ವಿಭಾಗಗಳು, ರಾತ್ರಿ ಶಾಲೆಗಳು, ಖಾಸಗಿ ತರಗತಿಗಳು ಇತ್ಯಾದಿಗಳ ಜೊತೆಗೆ ಶಿಶುವಿಹಾರದಿಂದ ಹಿಡಿದು ವಿಶ್ವವಿದ್ಯಾಲಯದ ವರೆಗಿರುವ ನಮ್ಮ ವಿದ್ಯಾಸಂಸ್ಥೆಗಳಲ್ಲಿ ಸುಮಾರು ೩.೧೨ ಲಕ್ಷ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಶಿಕ್ಷಣ ಪಡೆಯುತ್ತಿದ್ದಾರೆ.

**ಗ್ರಾಮೀಣ ಹಾಗೂ ಬುಡಕಟ್ಟು ಜನಾಂಗದವರಿಗಾಗಿ** ನಡೆಸಿದ ಹಲವಾರು **ಅಭಿವೃದ್ಧಿ ಯೋಜನೆ**ಗಳಿಂದ ಸುಮಾರು ೮೬.೫೧ ಲಕ್ಷ ಜನರು ಲಾಭ ಪಡೆದರು ಹಾಗೂ ೫೮.೬೬ ಕೋಟಿ ರೂಪಾಯಿಗಳನ್ನು ವ್ಯಯಿಸಲಾಯಿತು.

ದೇಶದ ವಿವಿಧ ಭಾಗಗಳಲ್ಲಿ ಹಲವಾರು **ಪರಿಹಾರ ಮತ್ತು ಪುನರ್ವಸತಿ ನಿರ್ಮಾಣ** ಕಾರ್ಯಗಳನ್ನು ಹಮ್ಮಿಕೊಳ್ಳಲಾಯಿತು. ಸುಮಾರು ೩೬.೭೮ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಡೆದ ಈ ಕಾರ್ಯಗಳಿಂದ ೨.೨೧ ಲಕ್ಷ ಕುಟುಂಬಗಳಿಗೆ ಸೇರಿದ ೭.೨೮ ಲಕ್ಷ ಜನರು ನೆರವನ್ನು ಪಡೆದಿದ್ದಾರೆ.

ಈ ಸಂದರ್ಭದಲ್ಲಿ ಸಂಸ್ಥೆಯ ಸರ್ವಸದಸ್ಯರಿಗೂ, ಸ್ನೇಹಿತರಿಗೂ ಅವರ ಸಹಾಯ ಸಹಕಾರಗಳಿಗಾಗಿ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

೧೮ ಡಿಸೆಂಬರ್, ೨೦೧೬

(ಸ್ವಾಮಿ ಸುಹಿತಾನಂದ)
ಪ್ರಧಾನ ಕಾರ್ಯದರ್ಶಿ

Managing Editor : Swami Atmajnananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವಲ್ & ಟೂರ್ಸ್

Orchid Travel & Tours

## ಅವಿಸ್ಮರಣಿಯ ವಿಶೇಷ ಪ್ರವಾಸಗಳು

### 18 ದಿನಗಳ ಅಮೇರಿಕಾ ಹಾಗೂ ಬಹಮಾಸ್ ಕ್ರೂಸ್ ಪ್ರವಾಸ

ಮೇ, ಜೂನ್, ಜುಲೈ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್,
ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಕೋ, ಆರ್‌ಲ್ಯಾಂಡೊ, ಬಹಮಾಸ್‌ಕ್ರೂಸ್

ಅಮೆರಿಕಾ



### 7 ದಿನಗಳ ಸಿಂಗಾಪುರ-ಮಲೇಶಿಯ ಪ್ರವಾಸ

ಫೆಬ್ರವರಿ, ಮಾರ್ಚ್
ಏಪ್ರಿಲ್

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ,
ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್,
ಯುನಿವರ್ಸಲ್ ಸ್ಟುಡಿಯೋ
ಮಲೇಶಿಯ : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ,
ಜಂಟಿಂಗ್ ಹೈಲ್ಯಾಂಡ್

ಸಿಂಗಾಪುರ್



### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.-ಯುರೋಪ್ ಪ್ರವಾಸ

ಏಪ್ರಿಲ್, ಮೇ
ಜೂನ್, ಜುಲೈ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್
ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್

ಲಂಡನ್



### 7 ದಿನಗಳ ಜಪಾನ್ ಪ್ರವಾಸ

ಏಪ್ರಿಲ್, ಮೇ

ಹೈ ಸ್ಪೀಡ್ ಬುಲೆಟ್ ರೈಲಿನಲ್ಲಿ ಪ್ರಯಾಣದ ಅನುಭವ ಹಾಗೂ
ಜಪಾನ್ ರಾಜಧಾನಿ ಟೋಕಿಯೋ
ಪ್ರವಾಸ ಸ್ಥಳ : ಒಸಾಕಾ, ಹಿರೋಷಿಮಾ, ಕ್ಯೋಟೋ, ಮೌಂಟ್‌ಫುಜಿ
ನಾರ ನಗರ ವೀಕ್ಷಣೆ ಹಾಗೂ ಇತರೆ

ಜಪಾನ್



### 12 ದಿನಗಳ ಚಾರ್‌ಧಾಮ್ ಯಾತ್ರ

ಮೇ, ಜೂನ್, ಜುಲೈ

ಬದರಿನಾಥ್, ಕೇದಾರ್‌ನಾಥ್ (ಹೆಲಿಕಾಪ್ಟರ್‌ನಲ್ಲಿ ಪ್ರಯಾಣ), ಯಮುನೋತ್ರಿ,
ಗಂಗೋತ್ರಿ, ದೆಹಲಿ, ಹರಿದ್ವಾರ್, ಹೃಶಿಕೇಶ್,
ಪಂಚಪ್ರಯಾಗ್ (ದೇವ, ರುದ್ರ, ಕರ್ಣ, ನಂದ, ವಿಷ್ಣು)

ಬದರಿನಾಥ್



### 3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ

ಜನವರಿ, ಫೆಬ್ರವರಿ
ಮಾರ್ಚ್

ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ
ಕಾರಂಜಿನರಸಿಂಹ, ಮಾಲೋಲನರಸಿಂಹ, ಯೋಗನರಸಿಂಹ, ಭಾರ್ಗವನರಸಿಂಹ
ಉಗ್ರನರಸಿಂಹ, ಛತ್ರವಟನರಸಿಂಹ ಹಾಗೂ ಲಕ್ಷ್ಮೀನರಸಿಂಹ

ಅಹೋಬಿಲಂ




**ಪ್ರಧಾನ ಕಛೇರಿ : ಬಸವನಗುಡಿ**
ನಂ. 98, 1ನೇ ಮಹಡಿ, ಡಿವಿಜಿ ರಸ್ತೆ
ಬಸವನಗುಡಿ, ಬೆಂಗಳೂರು - 560004.
ಫೋನ್: 080-26670646, 26621983
ಮೊಬೈಲ್ : 9900080799
9900080795

**ಶಾಖಾ ಕಛೇರಿ : ಮಲ್ಲೇಶ್ವರಂ**
ನಂ.198, 1ನೇ ಮಹಡಿ, 11ನೇ ಕ್ರಾಸ್, ಯತಿರಾಜಮಠ
ಬಿಲ್ಡಿಂಗ್, ಮಲ್ಲೇಶ್ವರಂ, ಬೆಂಗಳೂರು - 560003.
ಫೋನ್: 080-41204155, 23445559
ಮೊಬೈಲ್ : 9900080793
9900080799

**ಶಾಖಾ ಕಛೇರಿ : ಶಾಂತಿನಗರ**
ನಂ.4, 1ನೇ ಮಹಡಿ, ದಿವ್ಯಶ್ರೀ ಚೇಂಬರ್ಸ್ ಎದುರು
ಲ್ಯಾಂಗ್‌ಫೋರ್ಡ್ ಟೌನ್, ಶಾಂತಿನಗರ,
ಬೆಂಗಳೂರು - 560025. ಫೋನ್: 080-22221645
ಮೊಬೈಲ್ : 9900080794
9900080796

www.orchidtours.net

VIVEKA PRABHA (KANNADA MONTHLY)
February 2017, Vol.18, No. 2, No.of pages : 164

Registered With Registrar of News Papers Of India
under 72356/2000.postal Regn.No.KA/SK/MYS/480/
2015-17. LICENCED TO POST W.P.P.AT YADAVAGIRI
MYSORE 570 020,VIDE LICENCE NO.SK/WPP/MYS/155/2015-17



Printed at mayur graphics,Bangalore